# ಶ್ರೀ ಸಿದ್ಧಗಂಗಾ ಮಠ

## ಸಹಸ್ರಾರು ಬಡ ಮಕ್ಕಳ ಆಶ್ರಯ ಕೇಂದ್ರ

★ ಇಲ್ಲಿಗೆ ನೀಡಿದ ಉದಾರ ಹೃದಯದ ನಿಮ್ಮ ದಾನ ಅನ್ನ ಮತ್ತು ಜ್ಞಾನ ದಾಸೋಹದ ಮಹಾ ಪುಣ್ಯ ಕಾರ್ಯಗಳಿಗೆ ವಿನಿಯೋಗವಾಗುತ್ತದೆ.

★ ಈ ಮಹತ್ಕಾರ್ಯಕ್ಕೆ ನಾಡಿನ ಸಹಸ್ರ ಸಹಸ್ರ ಧರ್ಮಾಭಿಮಾನಿಗಳೇ ಶ್ರೀರಕ್ಷೆ ಎಂದು ಶ್ರೀ ಶ್ರೀ ಗಳವರು ಹೇಳುತ್ತಾರೆ.

★ ಈ ಪುಣ್ಯ ಕಾರ್ಯದಲ್ಲಿ ಭಾಗಿಗಳಾಗಿರಿ.

ಹಣವನ್ನು ಎಂ.ಒ, ಚೆಕ್ ಅಥವಾ ಡ್ರಾಫ್ಟ್ ಮೂಲಕ ಇವರಿಗೆ ಕಳುಹಿಸಿ.

ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು
ಶ್ರೀ ಸಿದ್ಧಗಂಗಾ ಮಠ–572131
ತುಮಕೂರು ಜಿಲ್ಲೆ.

ಇತಿ ಭಕ್ತಮಂಡಳಿ.

---

ಲೋಕಪ್ರಸಿದ್ಧಿಯಾದ ಉತ್ತಮವಾದ



# ಬಸವೇಶ್ವರ ಬ್ರಾಂಡ್

ಸೀಗೆಪುಡಿ ಉಪಯೋಗಿಸಿ

ಶ್ರೀ ಚನ್ನಬಸವೇಶ್ವರ ಸೋಪ್‌ನಟ್ ವರ್ಕ್ಸ್
ಶಿವಾಜಿ ನಗರ, ತುಮಕೂರು

# 'ಸಿದ್ಧಗಂಗಾ'

ಜುಲೈ , ೧೯೭೬

ಸಂಪುಟ–೧೨ ಸಂಚಿಕೆ–೭


ಮುಖ ಪುಟ

ಳನಲಿಸುವ ಬೆಳಗಾಗಿಯೆ ದಿನ ದಿನವೂ ಹಂಬಲಿಸಿ।
ಳಗಾಗಿಯೆ ಮೊರೆಯಿಡುತಿದೆ ಇಳೆ ಕಂಬನಿ ಹರಿಸಿ॥


ಪ್ರಕಾಶಕರು
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ
ಹೆಚ್. ಬಿ. ಗಂಗಾಧರಯ್ಯ

ಸಂಪಾದಕರು
ಪಂ॥ ಚನ್ನಪ್ಪ ಎರೇಸೀಮೆ
ಕೆ. ಜಿ. ರಂಗಯ್ಯ

ಜಾಹೀರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಹಂಚಿಕೆಯ ವ್ಯವಸ್ಥಾಪಕರು
ಎಸ್. ಗಂಗರುದ್ರಪ್ಪ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟನೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ
ವಾರ್ಷಿಕ ಚಂದಾ: 10 ರೂ
ಅಜೀವ ಸದಸ್ಯತ್ವ: 101 ರೂ




# ಶ್ರೀವಾಣಿ

ಸೌಜನ್ಯ, ವಿನಯ, ನಮ್ರ ವಾಣಿ, ಇವುಗಳಿಂದ ಅಮೃತ ಪಾನ ದಿಂದ ಉಂಟಾಗುವ ಆನಂದವೇ ಉಂಟಾಗುತ್ತದೆ. ಮಾತು ಮಾನವನ ಮಾನವೀಯತೆಯ ಅಳತೆಯ ಸಾಧನ. ಸಜ್ಜನ ದುರ್ಜನ ನಿರ್ಣಯವಾಗಬೇಕಾದರೆ ಮಾತಿನಿಂದಲೇ ಸಾಧ್ಯ. ಶತ್ರುತ್ವ ಮಿತ್ರತ್ವ ಬರುವುದು ಮಾತಿನಿಂದ. ಮಾತು ಕ್ರೌರ್ಯ, ಕಠೋರವಾದರೆ ಶತ್ರುತ್ವ; ಮಾತು ವಿನಯ, ಸೌಜನ್ಯವಾದರೆ ಮಿತ್ರತ್ವ. ಕತ್ತೆಯಿಂದ ಮಾನವನಿಗೆ ಬಹಳ ಉಪಕಾರ ವಾಗುತ್ತದೆ. ಎಲ್ಲೋ ಮೇದು, ಎಲ್ಲೋ ನಿಂತು, ನೀರು ಕುಡಿದು ಮಾನವನಿಗಾಗಿ ಹಗಲಿರುಳೂ ಬಿಡುವಿಲ್ಲದೆ ದುಡಿ ಯುತ್ತದೆ. ಆದರೆ ಅದನ್ನು ಕಂಡರೆ ಎಲ್ಲರಿಗೂ ಅಸಮಾಧಾ ನ, ಅಸಹ್ಯ, ಜಿಗುಪ್ಸೆ, ತಾತ್ಸಾರ ಮನೋಭಾವ. ಅದೊಂದು ಹಾಸ್ಯಾಸ್ಪದ ಪ್ರಾಣಿ. ಕಾರಣವೇನೆಂದರೆ ಅದರ ಬಾಯಿಂದ ಬರುವ ಕಠೋರ ಕರ್ಕಶ ವಾಣಿ. ಅದು ಕಿರಿಚಿ ದರೆ ಜನ ಕಿವಿ ಮುಚ್ಚಿಕೊಳ್ಳುತ್ತಾರೆ. ಅಪಶಕುನ ಎನ್ನು ತ್ತಾರೆ. ಅದರಿಂದ ಅದು ಮಾನವನಿಗಾಗಿ ಎಷ್ಟೇ ಬೆವರು ಸುರಿಸಿದರೂ, ಬೆನ್ನುಮೂಳೆ ಮುರಿದುಕೊಂಡರೂ, ಮಾನ ವನಿಗೆ ಅದರ ಮೇಲೆ ಪ್ರೀತಿ ಎಳ್ಳಷ್ಟೂ ಇಲ್ಲ; ಕರುಣೆಯೂ ಇಲ್ಲ. ಆದರೆ ಕೋಗಿಲೆಯ ವಿಷಯದಲ್ಲಿ ಹಾಗಲ್ಲ. ಹಾಗೆ ನೋಡಿದರೆ ಕೋಗಿಲೆಯಿಂದ ಮಾನವನಿಗೆ ಯಾವ ಪ್ರಯೋ ಜನವೂ ಇಲ್ಲ. ಆದರೂ ಅದನ್ನು ಕಂಡಾಗ, ಅದರ 'ಕುಹೂ ಕುಹೂ ಕೂಜನವನ್ನು ಕೇಳಿದಾಗ ಮನುಷ್ಯ ಆನಂದದಿಂದ ಉಬ್ಬಿ ಹೋಗುತ್ತಾನೆ; ತನ್ನನ್ನೇ ತಾನು ಮರೆಯುತ್ತಾನೆ. ಅದನ್ನು ಕಂಡೊಡನೆ ಎಲ್ಲಿಲ್ಲದ ಪ್ರೀತಿಯ ನ್ನು ವ್ಯಕ್ತಪಡಿಸುತ್ತಾನೆ. ಅದರ ಕಂಠದ ಮಾಧುರ್ಯವೇ ಅದರ ಲೋಕಪ್ರಸಿದ್ಧಿಗೆ ಕಾರಣ. ಅಂತೆಯೇ ವಾಕ್ ಮಾಧುರ್ಯ ಸರ್ವಲೋಕಮಾನ್ಯ. ಸದಾ ಬಾಯಿಂದ ಮೃದು ಮಧುರ ವಾಣಿ ಹೊರಡುತ್ತಿರಬೇಕು. ಅದೇ ಜೀವ ನದ ಮಹತ್ಸಾಧನೆ.

—

# ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಮಾಸ ಪತ್ರಿಕೆಯು ಲೇಖಕರಿಂದ ವಿಚಾರ ಪ್ರಚೋದಕವಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಧರ್ಮ, ಸಂಸ್ಕೃತಿ, ಸಾಮಾಜಿಕ, ಐತಿಹಾಸಿಕ ಹಾಗೂ ಸ್ಥಳ ಮಹಾತ್ಮೆಗಳಿಗೆ ಸಂಬಂಧಿಸಿದವುಗಳಾದರೆ ಹೆಚ್ಚು ಆದ್ಯತೆ ನೀಡಲಾಗುವುದು. ಪ್ರಚಲಿತ ಸಾಮಾಜಿಕ ಜೀವನದ ಸಮಸ್ಯೆಗಳನ್ನು ಬಿಂಬಿಸುವ ಹಾಗೂ ಅವುಗಳಿಗೆ ಪರಿಹಾರ ಸೂಚಿಸುವ ಸಣ್ಣಕಥೆ, ಕವನ ಮತ್ತು ಪ್ರಬಂಧಗಳಿಗೂ ಸ್ವಾಗತವುಂಟು. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿರಬೇಕು. ಸ್ವೀಕೃತವಾದ ಲೇಖನಗಳಿಗೆ "ಸಿದ್ಧಗಂಗಾ" ಆಗಿಂದಾಗ್ಗೆ ನಿಗದಿ ಮಾಡಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು ಸ್ಫುಟವಾಗಿ ಕಾಗದದ ಒಂದೇ ಮಗ್ಗುಲಲ್ಲಿ ಬರೆದು

"ಸಂಪಾದಕರು"

'ಸಿದ್ಧಗಂಗಾ' [ಕನ್ನಡ ಮಾಸಪತ್ರಿಕೆ]

ಶ್ರೀ ಸಿದ್ಧಗಂಗಾ ಕ್ಷೇತ್ರ -572131

ತುಮಕೂರು ಜಿಲ್ಲೆ

ಇವರಿಗೆ ಕಳುಹಿಸಿಕೊಡಬೇಕಾಗಿ ವಿನಂತಿ.

# ಪರಿವಿಡಿ

# ವೈರಾಗ್ಯನಿಧಿ

# ಅಕ್ಕಮಹಾದೇವಿ

— 'ಪ್ರಿಯದರ್ಶಿನಿ'

ಭರತ ಖಂಡದ ಧಾರ್ಮಿಕ, ಸಾಮಾಜಿಕ ಚರಿತ್ರೆಯಲ್ಲಿ ಸ್ತ್ರೀಯರ ಪಾತ್ರ ಮಹತ್ತರವಾದುದ್ದು! "ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ" ಎಂಬ ವಾಣಿಯಂತೆ ವೇದ ಕಾಲದಿಂದಲೂ ಹೆಣ್ಣು ಸಾಂಸಾರಿಕ ಜಗತ್ತಿನಲ್ಲಿ ಹೊಂದಿದ್ದ ಮಹತ್ವದ ಸ್ಥಾನದಷ್ಟೇ ಅಥವ ಅದಕ್ಕೂ ಮಿಗಿಲಾಗಿ ಆಧ್ಯಾತ್ಮಿಕ ಸಾಹಿತ್ಯ, ಸಾಮಾಜಿಕ ಕ್ಷೇತ್ರಗಳಲ್ಲೂ ತನ್ನ ಹಿರಿಮೆಯನ್ನು ಮೆರೆಯಿಸುತ್ತಾ ಬಂದಿದ್ದಾಳೆ.

ಸಾಹಿತ್ಯ "ಜೀವನದ ಪ್ರತಿಬಿಂಬ, ಜೀವನ ವಿಮರ್ಶೆ! ಬಾಳ ಬಟ್ಟೆಯ ಪರಾಗವು" ಎಂಬ ಮಾತಿಗೆ ಪುಷ್ಠಿ ಕೊಡುವಂತೆ ಹನ್ನೆರಡನೇ ಶತಮಾನದ ವಚನಗಳು ಉದಾಹರಣೆಯಾಗಿ ನಿಲ್ಲುತ್ತವೆ. ಪ್ರಸ್ತುತ ಲೇಖನದಲ್ಲಿ, ಹೆಣ್ಣು ಕುಲದ ಶಿರೋರತ್ನವೆನಿಸಿ, ಸರಳ ಸುಂದರ ವಚನ ಸಾಹಿತ್ಯದಿಂದ ವಾಗ್ದೇವಿಯ ಭಂಡಾರ ತುಂಬಿದ ಮಹಾಭಕ್ತೆ, ವೈರಾಗ್ಯನಿಧಿ ಶಿವಶರಣೆ 'ಅಕ್ಕಮಹಾದೇವಿ'ಯ ವಚನ ಸೌಂದರ್ಯವನ್ನೂ ಅದರಲ್ಲಿ ಪ್ರತಿಬಿಂಬಿತವಾಗಿರುವ ಅವಳ ಅವಿರತ ಪ್ರೇಮ, ವಿರಹ, ಭಕ್ತಿಗಳನ್ನು ಕಾಣಬಹುದು.

ಆಧ್ಯಾತ್ಮಿಕ ಪ್ರಪಂಚದಲ್ಲಿ ಮಹಾದೇವಿಯಕ್ಕನ ಜೀವನ ಒಂದು ಮಿಂಚಿನ ಶಿಖರ! ಅನುಭಾವ ಸಾಹಿತ್ಯವೆಂಬ ಮಾತಿಗೆ ಉದಾಹರಿಸಬಹುದಾದ ಆಕೆಯ ವಚನಗಳು ಆಕೆ ನಡೆದು ಬಂದ ದಾರಿಯನ್ನು, ತಿಳಿದ ತತ್ವವನ್ನು, ಮುಟ್ಟಿದ ಗುರಿಯನ್ನು, ತಾಕಿದ ಸನ್ನಿವೇಶಗಳನ್ನು ಚಿತ್ರಿಸುವಲ್ಲಿ ಯಶಸ್ವಿಯಾಗಿವೆ. ಇನ್ನಿತರ ವಚನಕಾರರಿಗಿಂತ ಆಕೆಯ ವಚನಗಳು ಬೇರಾಗಿ ನಿಲ್ಲುವುದು ಅವುಗಳಲ್ಲಿರುವ ವಿಶೇಷವಾದ ಕಾವ್ಯ ಗುಣಗಳಿಂದ. ಒಂದೊಂದು ವಚನವು ಆಣಿಮುತ್ತು ಭಾವ ಚಿಂತಾರತ್ನ.

ಲೌಕಿಕದ ಹಂಗನ್ನು ತೊರೆದು, ಉಟ್ಟ ಸೀರೆಯ ತೊಡೆದು, ದೃಢ ಸಂಕಲ್ಪದಿಂದ ತನ್ನ ನಲ್ಲನನ್ನು ಕೂಡಲು ಕಾತುರತೆಯಿಂದ ಹೊರಟ ಅಕ್ಕನ ಬಗ್ಗೆ ಕೆಲವರಿಗೆ ವಿಚಿತ್ರವಾಗಿ ಕಾಣಬಹುದು. ಆಕೆಯೇ ಹೇಳುವಂತೆ ಲೋಕವೆಂಬ ಮಾಯೆಗೆ ಶರಣ ಚಾರಿತ್ರ್ಯ ಮರುಳಾಗಿ ತೋರುವುದು. ಭವದ ಎಲ್ಲಾ ಆಕರ್ಷಣೆಗಳಿಂದ ದೂರ ನಿಂತು ಜೀವಿತದುದ್ದಕ್ಕೆ ಚೆನ್ನಮಲ್ಲಿಕಾರ್ಜುನನನ್ನೇ ಲೋಕ ಪತಿಯನ್ನಾಗಿ ವರಿಸಲು ಹೊರಟ ಅಕ್ಕ ಮಾಡಿದ ಉಗ್ರ ಸಾಧನೆ ಆಶ್ಚರ್ಯಕರವಾದದ್ದು. ಅವಳು ಬಾಳಿನಲ್ಲಿ ಕಂಡ ದರ್ಶನ ಭಾಷೆಯಲ್ಲಿ ಮೂಡಿ ಬಂದಿರುವುದಂತೂ ಕಲಾತ್ಮಕವಾಗಿದೆ! ಮಾತಿಗೆ ನಿಲುಕದ, ಕಣ್ಣಿಗೆ ಕಾಣದ, ಕಲ್ಪನೆಗೆ ಎಟುಕದ ಚಿಚ್ಛಕ್ತಿಯಾದ ಆ ಚೆನ್ನಮಲ್ಲಿಕಾರ್ಜುನನ್ನು ಅಕ್ಕ ವರ್ಣಿಸುವ ಬಗೆ ಇದು —

'ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ ಚೆಲುವಂಗಾನೊಲಿದೆ' ಅವಳ ಪ್ರೇಮ ಪ್ರವಾಹದಂತೆ ನಿರಂತರ ನಿಶ್ಚಲವಾದದ್ದು. ಚೆನ್ನಮಲ್ಲಿಕಾರ್ಜುನನನ್ನು ಉಳಿದು ಮಿಕ್ಕವರನ್ನು 'ಸಾವ ಕೆಡುವ, ಗಂಡರ ನೊಯ್ದು ಒಲೆಯೊಳಗಿಕ್ಕು ಮುಗಿಲ ಮರೆಯ ಬೊಂಬೆಯಂತೆ' ಎಂಬುದಾಗಿ ಹೇಳಿರುವುದೇ ಇದಕ್ಕೆ ಸಾಕ್ಷಿ!

ಹರನೇ ನೀನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಿಸಿದ್ದೆ ನೋಡಾ, ಎಂದು ಮನಬಿಚ್ಚಿ ಕಳವಳದಿಂದ ತನ್ನ ಪ್ರೇಮವನ್ನು ಅವನಲ್ಲಿ ತೋಡಿಕೊಳ್ಳುವಳು. ಅವಳ ಮನ ಅನ್ಯರಿಗೆಳಸುವುದೇ ಇಲ್ಲ! ಅಮೃತಾನ್ನವುಂಡವರು ಸಾಧಾರಣ ಅನ್ನೋದಕವನ್ನು ಬಯಸುವುದುಂಟೆ? ಹಾಗೆಯೇ

'ಗಿರಿಯಲ್ಲಲ್ಲದೆ ಹುಲ್ಲು ಮೊರಡಿಯಲ್ಲಾಡುವುದೇ ನವಿಲು?
ಕೊಳವಲ್ಲದೆ ಕಿರುವಳ್ಳಕ್ಕೆಳಸುವುದೇ ಹಂಸ?

ಮಾಮರ ತಳಿರಿಲ್ಲದೆ ಸ್ವರಗೈವುದೇ ಕೋಗಿಲೆ?'

ಅವಳ ಜೀವಿತದ ಗುರಿ ಚೆನ್ನಮಲ್ಲಿಕಾರ್ಜುನನ ಸಾಕ್ಷಾತ್ಕಾರ! ಅವನನ್ನು ಅರಸುತ್ತಾ ಹಸಿವು ತೃಷೆಗಳನ್ನು ತೊರೆದು ಕಾಡುಮೇಡು ಅಲೆಯುತ್ತಾ ಪಶುಪಕ್ಷಿಗಳನ್ನೆಲ್ಲಾ ತನ್ನಲ್ಲಿನ ಇಶವನ್ನು ಕಂಡಿದ್ದರೆ ಕರೆದು ತೋರಿ ಎಂದು ದೈನ್ಯದಿಂದ ಬೇಡುವುದಂತೂ ಹೃದಯ ಸ್ಪರ್ಶಿಯಾಗಿದೆ,

'ಅಳಿಸಂಕುಳವೇ, ಮಾಮರನೇ, ಬೆಳದಿಂಗಳೇ, ಕೋಗಿಲೆಯೇ
ನಿಮ್ಮೆಲ್ಲರನು ಬಂದು ಬೇಡುವೆನು! ಎನ್ನೊಡೆಯ
ಚೆನ್ನಮಲ್ಲಿಕಾರ್ಜುನ ದೇವರ ಕಂಡರೆ ಕರೆದು ತೋರಿರೆ!,

ವನವೆಲ್ಲವೂ ಅವನೇ! ವನದೊಳಗಣ ಸಸ್ಯ ಸಂಪತ್ತಿನಲ್ಲೆಲ್ಲಾ ಅವನ ರೂಪವನ್ನೇ ಕಾಣುತ್ತಾ,

ಚಿಲಿಪಿಲಿ ಎಂದೋದುವ ಗಿಳಿಗಳಿರಾ
ನೀವು ಕಾಣಿರೇ? ನೀವು ಕಾಣಿರೇ?
ಗಿರಿಗಹ್ವರ ದೊಳಗಾಡುವ ನವಿಲುಗಳಿರಾ
ನೀವು ಕಾಣಿರೇ? ನೀವುಕಾಣಿರೇ?,

ಈ ಹಂಬಲದಲ್ಲಿ ಹೊರಟ ಆಕೆಗೆ ಇದು ಜಡ, ಇದು ಚೇತನ ಎಂಬ ಅರಿವೂ ಕೂಡ ಮರೆಯಾಗುತ್ತದೆ. ಚೆನ್ನಮಲ್ಲಿಕಾರ್ಜುನನ ನಾಮವೇ ಅವಳ ಬಾಳಿನ ಪಂಚಾಕ್ಷರಿಯಾಯಿತು. ವಿರಹದ ತಾಪದಿಂದ ಕಿಚ್ಚಿಲ್ಲದ ಬೇಗೆಯಲಿ ಬೆಂದು, ನೊಂದು ಒರೆಯಂತೆ ಕರಕರಗಿ ಮಳಲಂತೆ ಜರಿಜರಿದು ಬಸವಳಿದಳು.

ಇರುಳು ನಾಲ್ಕು ಜಾವ ನಿಮ್ಮ ಕಳವಳದಲ್ಲಿಪ್ಪೆನು
ಹಗಲಿರಳು ನಿಮ್ಮ ಹಂಬಲದಲ್ಲಿ ಮೈಮರೆದೊ
ರಗಿಹೆನು ಚೆನ್ನಮಲ್ಲಿಕಾರ್ಜುನ,
ನಿಮ್ಮ ಒಲುಮೆ ನೆಟ್ಟು ಹಸಿವು ತೃಷೆನಿದ್ರೆಯ
ಮರೆವೆನು'

ಒಂದು ಗಳಿಗೆಯೂ ಅವನ ಸಂಗವನ್ನು ಬಿಟ್ಟಿರ ಲಾರಳು. ಇದು ಯಾವುದೋ ಒಂದು ಗಳಿಗೆಯಲ್ಲಿ ಮಾತ್ರ ಬಾಯಾರಿಸಿತೆಂದು ಅರ್ಥವಲ್ಲ. ಅವಳ ಇಡೀ ಜೀವನವನ್ನು ಮಿಡಿದದ್ದು ಇದೊಂದೇ ಹಂಬಲ!

"ಕಳವಳದ ಮನವು ತಲೆಗೆಳವಾದುವವ್ವ
ಸುಳಿದು ಬೀಸುವ ಗಾಳಿ ಉರಿಯಾಯಿತವ್ವ
ಬೆಳದಿಂಗಳು ಬಿಸಿಯಾಯಿತು, ಕೆಳದಿ
ಹೊಳಲ ಸುಂಕಿಗನಂತೆ ತೊಳಲುತಿದ್ದೆನವ್ವ"

ಮಾಯೆಯ ಬಲೆಯನ್ನು ಹರಿದು ಶಿವ ದರ್ಶನಮಾಡಲು ಪಂಚೇಂದ್ರಿಯಗಳನ್ನು ಗೆಲ್ಲಲು ಹೊರಟ ಅಕ್ಕ ತನ್ನ ಅಂತರಂಗದ ತಳಮಳ, ಪ್ರೇಮ, ನಿರಾಶೆ, ವಿರಹಗಳನ್ನು ನಾನಾ ಬಗೆಯಾಗಿ ತೋಡಿಕೊಂಡಿದ್ದಾಳೆ. ಈ ಕಳವಳ ಅವಳ ಇಡೀ ಜೀವನವನ್ನು ರಸಮಯವಾಗಿಸಿತು.

"ನೀ ಕೇಳದರೆ ಕೇಳು, ಕೇಳದಿದ್ದಡೆ ಮಾಣು,
ನಾನಿನ್ನ ಹಾಡಿಲ್ಲದೆ ಸೈರಿಸಲಾರೆನಯ್ಯಾ
ನೀ ಒಲಿದರೆ ಒಲಿ; ಒಲಿಯದಿದ್ದರೆ ಮಾಣು
ನಾನಿನ್ನ ಪೂಜಿಸದಲ್ಲದೆ ಸೈರಿಸಲಾರೆನಯ್ಯಾ

ಅವನು ಕೇಳಲಿ ಬಿಡಲಿ ಅವಳ ಕೂಗು ನಿರಂತರ! ತನ್ನ ಗುರಿ ಸಾಧನೆಯಲ್ಲಿ ಸರ್ವ ಸಮರ್ಪಣ ಭಾವದಲ್ಲಿ ನಿಜ್ವಲವಾಗಿ ನಿಂತು ತಪವನಾಚರಿಸಿದಳು. ಚೆನ್ನಮಲ್ಲಿಕಾರ್ಜುನನೇ ಅವಳ ಬದುಕಿನ ರಕ್ಷೆ!

ಅಕ್ಕ ತನ್ನ ಸಾಧಕಜೀವನದಲ್ಲಿ ತನಗೆ ಅಂಟಿಕೊಂಡ ಮಾಯೆ ಮದ ಕಾಯದ ಕತ್ತಲೆ. ಜೀವನದ ಜಂಜಡಗಳನ್ನು ಕಳಚಿ ಕೊಳ್ಳಲು ಕೈಗೊಂಡ ಸತತ ಹೋರಾಟದ ಚಿತ್ರಪರಂಪರೆ ಅವನ್ನು ಹಲವಾರು ವಚನಗಳಲಿ ಹರಿದು ಬಂದಿದೆ. ಉದಾಹರಣೆಗೆ

"ತರಣಿಯ ಹುಳು ತನ್ನ ಸ್ನೇಹಕೆ ಮನೆಯ ಮಾಡಿ
ತನ್ನ ನೂಲು ತನ್ನನೇಸುತ್ತಿ ಸಾವ ತೆರನಂತೆ
ಮನಬಂದಂತೆ ಬಯಸಿ ಬಯಸಿ ಬೇವುತ್ತಿರುವೆನಯ್ಯಾ
ಎನ್ನ ಮನದ ದುರಾಶೆಯ ಮಾಣಿಸಿ
ನಿಮ್ಮತ್ತ ತೋರಾ ಚೆನ್ನಮಲ್ಲಿಕಾರ್ಜುನ"

ಹಿಂದಣ ಹಳ್ಳಮುಂದಣ ತೊರೆಯಂತಹ ಇಕ್ಕಟ್ಟಿನಲ್ಲಿ ಸಿಲುಕಿದಾಗಲೂ ಧೃತಿಗೆಡದೆ ನಂಬಿಕೆ ಬಿಡದೆ. ಶಾಂತಿಯೇ ಮೈವೆತ್ತಂತೆ ತಾಳ್ಮೆಯಿಂದ ಮುಂದೊದಗಲಿರುವ ಮಹಾ ಪುಣ್ಯಕ್ಕಾಗಿ ಕಾಯುತ್ತಲೇ ಇದ್ದಳು,

"ನಿನ್ನರಿವಿನ ನರಕವೇ ಮೋಕ್ಷ, ನಿನ್ನರಿ

ಯದ ಮುಕ್ತಿಯೇ ನರಕ" ಎಂಬ ತತ್ವವೊಂದನ್ನು ಕಂಡು ಕೊಂಡಳು. ಸ್ವಾನುಭಾವದ ಬೆಳಕಿನಲ್ಲಿ ಅಡಿಯಿಟ್ಟ ಅಕ್ಕನ ಒಂದೊಂದು ಮಾತೂ ಮಾಣಿಕ್ಯ. ಕಾವ್ಯ ಪೀಯೂಷವಾಗಿದ್ದರೆ ಅಚ್ಚರಿಯಲ್ಲ.

ಲೌಕಿಕಕ್ಕೆ ಅಂಟದಂತಿದ್ದ ಅಕ್ಕನ ವೈರಾಗ್ಯದ ನಿಲುವನ್ನು

"ಹಸಿವಾದೊಡೆ ಬಿಕ್ಷಾನ್ನಗಳುಂಟು, ತೃಷೆಯಾದೊಡೆ ಕೆರೆಬಾವಿಗಳುಂಟು
ಶಯನಕ್ಕೆ ಪಾಳುದೇಗುಲಗಳುಂಟು, ಚೆನ್ನಮಲ್ಲಿ-
ಕಾರ್ಜುನ! ಆತ್ಮ ಸಂಗಾತಕ್ಕೆ ನೀನೆನಗುಂಟು!"

ಎಂಬ ವಚನದಲ್ಲಿ ಕಾಣಬಹುದು.

ಭಕ್ತನನ್ನು ನಾನಾ ಪರೀಕ್ಷೆಗೀಡು ಮಾಡುವ ಭಗವಂತನಿಗೆ ಅಕ್ಕ ಸವಾಲು ಹಾಕುತ್ತಾ ಚಂದನವ ಕಡಿದು ತೇದೊಡೆ ನೊಂದೆನೆಂದು ಕಂಪ ಬಿಟ್ಟೀತೆ' ಎನ್ನುತ್ತಾ

"ಆರು ಇಲ್ಲದವಳೆಂದು ಅಳಿಗೊಳಲು ಬೇಡ ಕಂಡಯ್ಯ,
ಏನ ಮಾಡಿದೆಡೆಯಾ ನಾ ಅಂಬುವಳಲ್ಲ,
ತರಗೆಲೆಯ ಮೆಲಿದು ಸುರಗಿಯಾ ಮೇಲೊರಗಿ

ನಿನ್ನನ್ನು ಸೇರುವೆ" ಎಂದು ಹೇಳುತ್ತಾಳೆ. ಈ ಆತ್ಮವಿಶ್ವಾಸ ಭದ್ರ ಕೋಟೆಯುಲ್ಲಿರುವವರಿಗೆ ಅಂಜಬೇಕಾದುದಾದರೂ ಯಾರಿಗೆ ?

ಮತ್ತೊಮ್ಮೆ, ತಾನೆಷ್ಟು ಬೇಡಿದರೂ ಮನ ಕರಗದೆ ಕುಳಿತು ತನ್ನನ್ನು ವಿರಹದ ದಳ್ಳುರಿಯಲ್ಲಿ ದಹಿಸುತ್ತಿರುವ ಮಲ್ಲಿನಾಥನನ್ನು

"ಕಿಡಿಕಿಡಿ ಕೆದರಿದರೆ ನನಗೆ ಹಸಿವು, ಕೃಪೆ ಅಡಗಿತ್ತೆಂಬೆನು
ಮುಗಿಲು ಹರಿದು ಬಿದ್ದರೆ ಎನಗೆ ಮಜ್ಜನಕ್ಕೆ ರೆಯೆಂಬೆನು ಚೆನ್ನಮಲ್ಲಿಕಾರ್ಜುನಾ!
ಶಿರಹರಿದು ಬಿದ್ದರೆ ಪ್ರಾಣ ನಿಮಗರ್ಪಿತವೆಂಬೆನು"

ಎನ್ನುತ್ತಾಳೆ.

ಅವಳ ವೈರಾಗ್ಯ ಜೀವನದ ಸಾರವೆಲ್ಲಾ ನುಡಿಯಾಗಿ ಹರಿದು ಬಂದಂತೆ ಭಾಸವಾಗುತ್ತದೆ. ಆರ್ತಳಾಗಿ ಮೊರೆಯಿಟ್ಟು ಸೋತವಳಂತೆ ಕಡೆಗೊಮ್ಮೆ ಅಸಹಾಯಕತೆಯಿಂದ 'ನೀನೊಲಿವುದೇ ಸುಖ, ಎನ್ನುತ್ತಾಳೆ. ಹಗಲು ನಾಲ್ಕು ಜಾವ, ಇರಳು ನಾಲ್ಕು ಜಾವ ಅವನ ಕಳವಳದಲ್ಲೇ ಕಾಲ ಹಾಕಿ ಸೊರಗಿದಳು. ಕೊನೆಗೆ ಭಕ್ತರೂ ಮೊರೆಗೆ ಓ ಗೊಡುವ ಭಗವಂತನಂತೆ ಚೆಲುವ ಚೆನ್ನಿಗ, ಅಕ್ಕನ ಅಂತರಂಗದ ಪ್ರಿಯಚೆನ್ನಮಲ್ಲಿಕಾರ್ಜುನನ ಆಕೆಯನ್ನು ದರ್ಶಿಸಿದಾಗ ಅವಳ ಆನಂದಕ್ಕೆ ಮಿತಿಯುಂಟೆ ?

ಆಸೆ ಕೈಗೂಡಿದ ಭರದಲ್ಲಿ ಪ್ರೈ ಹೃದಯ ತುಂಬಿ ಹಾಡುತ್ತಾ ನ್ಯೆಮರೆಯುತ್ತಾ ಹೊಳೆವ ಕೆಂಜೆಡೆಗಳ, ಮಣಿ ಮುಕುಟ, ಸುಳಿಗೊರಳ ಗೊರವನನ್ನ ಕಂಡು ಕಣ್ಣು ಮುಚ್ಚಿದಳು. ದೀರ್ಘ ಹಂಬಲ, ತಪಸ್ಸು ಸಿದ್ಧಿಸಿತು. ಪರಮಗುರಿಯಾದ ಅಮೃತತ್ವ ಅವಳಿಗೆ ಲಭ್ಯವಾಯಿತು. ಚನ್ನಮಲ್ಲಿಕಾರ್ಜುನನಲ್ಲಿ ಒಂದಾಗಿ ಬೆರತು ಭವ್ಯ ದೇವಿಯಾದಳು.

ಹೀಗೆ ತನ್ನ ಮನದ ಕಣ್ಮಣಿ ಚನ್ನಮಲ್ಲಿಕಾರ್ಜುನನ ಸಾಕ್ಷಾತ್ಕಾರಕ್ಕಾಗಿ ಅಕ್ಕ ನಡೆದ ಪಥದಲ್ಲಿ ಅನೇಕ ಸಂಕಷ್ಟಗಳನ್ನು, ಟೀಕೆ, ಟಿಪ್ಪಣಿಗಳನ್ನು ಎದುರಿಸಬೇಕಾಯಿತು. ತರುಣಾವಸ್ಥೆಯಲ್ಲಿದ್ದ, ರಾಜಮನೆತನದ, ಸುಕೋಮಲ ಹೆಣ್ಣಾದ ಆಕೆ ತೋರ್ಬೆರಳ ಕುಹಕಕ್ಕೆ ಗುರಿಯಾದರೂ ನೋಯದೆ, ದಿಗಂಬರಿಯಾದರೂ ಲಜ್ಜೆ ಪಡದೆ

''ಬೆಟ್ಟದಮೇಲೊಂದು ಮನೆಯ ಮಾಡಿ
ಮೃಗಗಳಿಗಂಜಿದೊಡೆಂತಯ್ಯ

ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿ, ನಿಂದೆಗಳು ಬಂದರೆ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು !'' ಹಾಗೂ

''ಹಣ್ಣು ಮೆದ್ದ ಬಳಿಕಲಾಮರನ ಆರು ತರಿದರೇನು?
ಹೆಣ್ಣು ಬಿಟ್ಟ ಬಳಿಕ ಆಕೆಯನಾರು ಕೂಡಿದರೇನು"

ಎಂಬುದಾಗಿ ಲೋಕದ ಡೊಂಕವನ್ನು ತಿದ್ದುವ ಜನರನ್ನು ಪ್ರಶ್ನಿಸಿದ್ದಾಳೆ.

ಅಕ್ಕನ ಒಂದೊಂದು ವಚನವೂ ಸ್ವಾನುಭಾವದ ಬೆಳಕಿನಿಂದ ಪರಿಪಕ್ವಗೊಂಡು, ಅವಳ ಅಂತರಂಗಕ್ಕೆ ಹಿಡಿದ ಕನ್ನಡಿಯಂತಿದೆ. ಭಾವ ಭಾಷೆಗಳ ಸಾಮರಸ್ಯ ಈ ವಚನಗಳಲ್ಲಿ ಕಾಣಬರುವ ಒಂದು ವೈಶಿಷ್ಟ್ಯ. ಆದ್ದರಿಂದಲೇ ಒಂದೊಂದು ವಚನವೂ ಭಾವಚಿಂತಾರತ್ನ ಎನ್ನಬಹುದು. ಹೆಣ್ಣಿನ ಹಿರಿಮೆಯನ್ನು ಹೆಚ್ಚಿಸಿ. ಹೆಣ್ಣುಕುಲದ ಶಿರೋರತ್ನವಾದ ಅಕ್ಕನ ಭಕ್ತಿ ವೈರಾಗ್ಯ. ವಿಶ್ವಪ್ರೇಮ ಅನುಕರಣೀಯ:ವಾದದ್ದು.

—

# ಸಮುದ್ರದಡಿಯಲ್ಲಿ ಸಾಹಸ

ಕ್ಯಾಪ್ಟನ್ ಎಂ. ಜಿ. ಕೆ. ಮೂರ್ತಿ.

ನೂರಾರು ಶತಮಾನಗಳಿಂದ ಅಸಂಖ್ಯಾತ ಹಡಗುಗಳು ಮುಳುಗಿ ಹೋಗಿ ಕೋಟಿಗಟ್ಟಲೆ ಬೆಳ್ಳಿ, ಬಂಗಾರ, ರತ್ನಾದಿ ನಿಧಿ ನಿಕ್ಷೇಪಗಳು ಸಾಗರದಾಳದಲ್ಲಿ ಕೂಡಿ ಬಿದ್ದಿವೆ. ಅವುಗಳನ್ನು ಶೋಧಿಸಲು ಎಂಥ ಸಾಹಸಿಗಳಿಗೂ ಸಧ್ಯವಾಗದೆ ಚರಿತ್ರೆಯ ಅನೇಕ ಸಂಗತಿಗಳು ಬಿಡಿಸಲಾರದ ಸಮಸ್ಯೆಗಳಾಗಿದ್ದವು. ಮೂರು ದಶಕಗಳಿಂದೀಚೆಗೆ ಧೀರ ಸಂಶೋಧಕರು ಆಧುನಿಕ ಸಲಕರಣೆಗಳ ನೆರವಿನಿಂದ ಸಾಗರದ ಅಗಾಧ ಆಳಗಳಿಗೆ ಧುಮುಕಿ ಹುಗಿದ ನಿಧಿ ನಿಕ್ಷೇಪಗಳ ಭಗ್ನಾವಶೇಷಗಳನ್ನು ಸಂಶೋಧಿಸಿ ಅನೇಕ ರಹಸ್ಯಗಳನ್ನು ಹೊರಪಡಿಸಿದ್ದಾರೆ. ಪ್ರಾಕ್ತನ ವಿಮರ್ಶಕರ ಸಾಹಸಗಳಿಂದ "ನೀರೊಳಗಿನ ಪ್ರಾಚೀನ ವಸ್ತು ಶಾಸ್ತ್ರ" ವೆಂಬ ನವೀನ ಕಲಾಕೌಶಲವು ಬೆಳೆದಿದೆ.

"ನೀರೊಳಗಿನ ಶ್ವಾಸಕೋಶ"ದಿಂದ ಸಾಗರದೊಳಗೆ ಉಸಿರಾಡಲು ಸಾಧ್ಯವಾಗಿದೆ. ವ್ಯಕ್ತಿಯು ಒತ್ತಡ ಗಾಳಿ ತುಂಬಿದ ಕೊಳವೆಗಳನ್ನು ಬೆನ್ನಿಗೆ ಬಿಗಿದುಕೊಂಡು, ಸೀಸದ ಭಾರ ತುಂಬಿದ ನಡುಕಟ್ಟನ್ನು ಮೈಹವಣ ಸಮತೂಕವಾಗುವಂತೆ ಕಟ್ಟಿಕೊಂಡು, ನೀರಿನಲ್ಲಿ ನೋಡಲು ಆಗುವಂಥ ಕನ್ನಡಕವನ್ನು ಧರಿಸಿ, ಕಪ್ಪೆಗಳ ಜಾಲಪಾದಗಳಂತಿರುವ ರಬ್ಬರಿನ ಹಾಸಡಿಗಳನ್ನು ಕಾಲಿಗೆ ಕಟ್ಟಿಕೊಂಡರೆ ನೀರಿನೊಳಗೆ ಎಲ್ಲೆಲ್ಲೂ ಅಲೆದಾಡಲು ಸಾಧ್ಯ. "ಬಾತಿಸ್ಫಿಯರ್" ಎಂಬ ಸಲಕರಣೆಯಿಂದ ಸಾಹಸಿಗಳು 3020 ಅಡಿ ಆಳಕ್ಕೆ ಹೋದರು. "ಬಾತಿಸ್‌ಕಫೆ" ಎಂಬುದರಿಂದ 13,300 ಅಡಿ ಕೆಳಗೆ ಹೋದರು. ಪ್ರಚಂಡ ಸಾಹಸಿಗಳು 1960ರಲ್ಲಿ ಶಾಂತಸಾಗರದ ತಳಕ್ಕೆ ಏಳು ಮೈಲಿಗಳಾಳ ಇಳಿದರು. ಸಮುದ್ರದೊಳಗೆ ಸ್ಲೆಡ್‌ಗಳಲ್ಲಿ ವಿಶೇಷ ಬಗೆ ಕ್ಯಾಮರಾಗಳನ್ನೂ, ದೀಪಗಳನ್ನೂ ಒಯ್ಯಲು ಸೌಕರ್ಯಗಳಾಗಿವೆ. ನಿಪುಣ ಛಾಯಾಗ್ರಾಹಿಗಳು, ಚಲನಚಿತ್ರ ನಿರ್ಮಾಪಕರು, ಟೆಲಿವಿಜನ್ ತಾಂತ್ರಿಕರು ಸಮುದ್ರದೊಳಗೆ ಸಾವಿರಾರು ಛಾಯಾಚಿತ್ರಗಳನ್ನು ತೆಗೆದರು.

ಸ್ಟಾಕ್‌ಹೋಂ ಪಟ್ಟಣದಾಚೆ 1628 ರಲ್ಲಿ ಸಮುದ್ರದೊಳಗೆ ಮುಳುಗಿಹೋಗಿ 333 ವರ್ಷಗಳ ಕಾಲ ಹುದುಗಿದ್ದ "ವಾಸಾ" ಎಂಬ ಸ್ವೀಡನ್ ದೇಶದ ಯುದ್ಧ–ಹಡಗು 1961 ರಲ್ಲಿ ಅಖಂಡವಾಗಿ ಸ್ವಲ್ಪವೂ ಧಕ್ಕೆಯಾಗದಂತೆ ಮೇಲಕ್ಕೆ ಎತ್ತಲ್ಪಟ್ಟಿತು. ನೂರಾರು ಬಗೆ ಸಾಮಾನುಗಳು ಸಿಕ್ಕಿದವು. ಮಧ್ಯೆ ಅಮೇರಿಕದ ಆಳವಾದ ಹೊಂಡಗಳಲ್ಲಿ ಅಗ್ನಿಶಿಲೆಯ ಚೂರಿಗಳು, ಕುಂಬಾರಿಕೆ ಸಾಮಾನುಗಳು, ಪ್ರತಿಮೆಗಳು, ತಾಮ್ರದ ಗಂಟೆಗಳು, ನಗ ನಾಣ್ಯಗಳು ಸಿಕ್ಕಿವೆ. ಪ್ರಾಚೀನ ಜನಾಂಗಗಳಾದ ಈಜಿಪ್ಟಿನವರು, ಫಿನೀಷಿಯರ್ರು, ಇಟ್ರೂಸ್ಕರ್ರು, ಗ್ರೀಕರು, ರೋಮನ್‌ರು ಸಾವಿರಾರು ವರ್ಷಗಳ ಕಾಲ ಹಡಗು–ಪ್ರಯಾಣ ಮಾಡಿದ್ದ ಭೂಮಧ್ಯ ಸಮುದ್ರದಲ್ಲಿ ಶೇಖರವಾದ, ಸುಂದರ ರಾಶಿ ರಾಶಿ ಅಮೂಲ್ಯ ವಸ್ತುಗಳು ಸಿಕ್ಕಿವೆ. ಕೆಲವು ಹೂಜಿಗಳಲ್ಲಿ 2000 ವರ್ಷಗಳಷ್ಟು ಹಿಂದಿನ ದ್ರಾಕ್ಷಾರಸಗಳು ಇನ್ನೂ ಇವೆ. ಜಲಾಂತರ್ಗತ ವಸ್ತು ಸಂಶೋಧಕರು ಸೇಂಟ್ ಪಾಲನು 1900 ವರ್ಷಗಳ ಹಿಂದೆ ಹೋದಾಗ ಮಾಲ್ಟಾ ಆಚೆ ಒಡೆದ ಹಡಗುಗಳನ್ನು ಹುಡುಕುತ್ತಿದ್ದಾರೆ. ದಕ್ಷಿಣ ಆಫ್ರಿಕದ ಆಳವಾದ ಹೊಂಡಗಳಲ್ಲಿ ಇತಿಹಾಸದ ಮುಂಚಿನ ಅವಶೇಷಗಳು ಪತ್ತೆಯಾಗಿವೆ.

ಹದಿನಾಲ್ಕು ಶತಮಾನಗಳ ಹಿಂದೆ ಒಡೆದು ಹೋಗಿದ್ದ ಬೈಜಾಂಟೈನ್ ದೇಶದ ಹಡಗಿನ ಅವಶೇಷಗಳನ್ನು ಬಹು ಸಾಹಸದಿಂದ ಅಗೆದು ಶೋಧಿಸಲಾಗಿದೆ. ಏಳನೇ ಶತಮಾನದ ಬೈಜಾಂಟೈನ್ ಚಕ್ರವರ್ತಿಯ ಕಲೆಯಿರುವ ಚಿನ್ನದ ನಾಣ್ಯಗಳು ಸಿಕ್ಕಿ ಆ ಹಡಗು ಒಡೆದ ಕಾಲ ಗೊತ್ತಾಯಿತು. ಸಮುದ್ರತಳದ ಭೂಮಿಯ ಮೇಲೆ ನಿಂತು ಒಂದು ವಿಶೇಷಕ್ರಮದಿಂದ ಆ ಹಡಗನ್ನು ಸರ್ವೆ ಮಾಡಿದರು. ನೀರೂರದ ಸಲಕರಣೆಗಳು ಬಳಸಲ್ಪಟ್ಟವು. ಸಮುದ್ರದೊಳಗೆ ನಕಾಶಗಳನ್ನು ಬರೆಯಲು ಪ್ಲಾಸ್ಟಿಕ್ ಷೀಟ್‌ಗಳೂ, ಪ್ಲಾಸ್ಟಿಕ್ ಟ್ಯಾಗ್‌ಗಳೂ ಸಿದ್ಧವಾದವು. ಅದೇ ರೀತಿಯ ಹೊಸ ಹಡಗನ್ನು ನಿರ್ಮಿಸಲು ನಕ್ಷೆಯು ಸಮುದ್ರದೊಳಗೇ ಬರೆಯಲ್ಪಟ್ಟಿತು.

1692ರಲ್ಲಿ ಭೂಕಂಪದಿಂದ ಸಾಗರಕ್ಕೆ ಎಸೆಯಲ್ಪಟ್ಟ ಜಮೈಕಾ ದೇಶದ ಪೋರ್ಟ್‌ರಾಯಲ್ ಪಟ್ಟಣದ ಶೋಧನೆಯಲ್ಲಿ ಸಿಕ್ಕಿದ ಹಿತ್ತಾಳೆ ಗಡಿಯಾರವು ಭೂಕಂಪದ ಹೊತ್ತನ್ನು ತೋರಿಸಿತು. ಒಂದು ಸೀಸೆಯಲ್ಲಿ 267 ವರ್ಷಗಳಷ್ಟು ಹಳೆಯ ದ್ರಾಕ್ಷಾರಸವಿತ್ತು. ಇನ್ನೊಂದು ಸಂಶೋಧನೆಯಲ್ಲಿ 2200 ವರ್ಷಗಳ ಹಿಂದೆ ಮುಳುಗಿದ್ದ ಗ್ರೀಸ್ ದೇಶದ ಒಂದು ಹಡಗಿನಲ್ಲಿ ಅಷ್ಟು ಹಿಂದಿನ ದ್ರಾಕ್ಷಾರಸದ ಹೂಜಿಗಳು ಸಿಕ್ಕಿದವು. 3000 ಕ್ಕಿಂತಲೂ ಹೆಚ್ಚು ವರ್ಷಗಳ ಹಿಂದೆ ಟರ್ಕೀ ದೇಶದ ಹತ್ತಿರ ಒಡೆದುಹೋಗಿದ್ದ ಹಡಗಿನಿಂದ ಒಂದು ಅಂತರ್‌ರಾಷ್ಟ್ರೀಯ ಸಂಸ್ಥೆಯ ಬಹು ಚಮತ್ಕಾರ, ಸಾಮರ್ಥ್ಯದಿಂದ ಕಂಚಿನ ಯುಗಹ ನೇಗಿಲುಗಳು, ಆಯುಧಗಳು, ಸಲಿಕೆಗಳನ್ನು ಒಂದು ಟನ್‌ಗಿಂತ ಹೆಚ್ಚಾಗಿ ಕೂಡಿಸಿತು. ಆ ಹಡಗಿನ ನಾವಿಕರು 3000 ವರ್ಷಗಳ ಹಿಂದೆ ತಿಂದ ಆಹಾರದಲ್ಲಿದ್ದ ಮೀನಿನ ಎಲುಬುಗಗಳನ್ನೂ ಕೂಡ ಕಂಡು ಹಿಡಿಯಲಾಯಿತು.

2000 ವರ್ಷಗಳ ಹಿಂದೆ ರೋಮನ್ನರು ಗ್ರೀಸ್ ದೇಶದಿಂದ ಕೊಳ್ಳೆ ಹೊಡೆದು ರೋಂಗೆ ತರುತ್ತಿದ್ದಾಗ ಒಡೆದು ಮುಳಗಿದ ಹಡುಗುಗಳ ಭಗ್ನಾವಶೇಷಗಳಲ್ಲಿ ನಕ್ಷತ್ರಶಾಸ್ತ್ರದ ಒಂದು ಅದ್ಭುತ ಯಂತ್ರವು 1900ರಲ್ಲಿ ದೊರಕಿತು. ನಾನಾ ನಕ್ಷತ್ರಗಳು ಹುಟ್ಟುವ, ಮುಳುಗುವ ವಿಧಗಳನ್ನೂ, ಚಲಿಸುವ ಪಥಗಳನ್ನೂ ತಿಳಿಸುತ್ತಿದ್ದ ಆ ಅಪೂರ್ವ ವಸ್ತು ಗ್ರೀಸ್ ದೇಶದಲ್ಲಿ ಒಂದೇ ಇತ್ತು. ಕ್ರಿ. ಪೂ. 240 ರ ಭೂಕಂಪದಲ್ಲಿ ಸಾಗರದೊಳಗೆ ಮಾಯವಾದ ಕ್ರಿಸೆ ಎಂಬ ಗ್ರೀಸ್‌ದೇಶದ ದ್ವೀಪದ ಸ್ಥಳವು ಗೊತ್ತಾಗದೆ, ಪರಿಶೋಧಕರು ಹೋಮರ್ ಕವಿಯ ಇಲಿಯಡ್ ಗ್ರಂಥದಲ್ಲಿದ್ದ ಕುರುಹಿನಿಂದ ಆ ದ್ವೀಪವನ್ನೂ, ಅಲ್ಲಿದ್ದ ಅಪೋಲೋ ದೇವತೆಯ ಗುಡಿಯನ್ನೂ ಕಂಡುಹಿಡಿದರು.

ಸಿಲೋನಿನ ಸಮುದ್ರತೀರದಾಚೆ ಗ್ರೇಟ್ ಬಾಸೆಸ್ ಎಂಬ ಬಹು ಅಪಾಯಕಾರಿ ಹವಳದ ಬಂಡೆಗಳು ಅನೇಕ ಮೈಲು ದೂರ ಚಾಚಿಹೋಗಿವೆ. 1702ರಲ್ಲಿ ಅಲ್ಲಿ ಒಡೆದು ಮುಳುಗಿದ ಹಡಗಿನ ಅವಶೇಷಗಳನ್ನು ಪತ್ತೆ ಮಾಡಿದ ಪರಿಶೋಧಕರಿಗೆ ಕಂಚಿನ ಬಂದೂಕಗಳು, ದೊಡ್ಡ ಫಿರಂಗಿ, ರಾಶಿ ರಾಶಿ ಬೆಳ್ಳಿ ನಾಣ್ಯಗಳು ಸಿಕ್ಕಿದವು. ಸೂರತ್ತಿನ ರೂಪಾಯಿಗಳು ಟಂಕ ಸಾಲೆಯಿಂದ ಬಂದಿದ್ದವು. ಅವು 1100 ನಾಣ್ಯಗಳ ರಾಶಿಯಲ್ಲಿದ್ದವು. ನಾಣ್ಯಗಳನ್ನು ಎಣಿಸಿ ಚೀಲಗಳಲ್ಲಿ ತುಂಬಿ ಗಂಟುಹಾಕಿದಂತಿತ್ತು. ಅಲೆಗಳ ಹೊಡೆತ, ಪ್ರವಾಹದ ಸೆಳೆತ ಉಗ್ರವಾಗಿದ್ದವು. ಶೋಧನೆಗೆ ಪರಿಸ್ಥಿತಿಗಳು ಬಹು ಕಠಿಣವಾಗಿದ್ದವು. ಮನುಷ್ಯನನ್ನು ಸಮುದ್ರ ಬುಡಕ್ಕೆ ಕಟ್ಟಿಹಾಕದಿದ್ದರೆ ಅವನ 30-40 ಅಡಿ ದೂರ ಪ್ರವಾಹದ ಭರದಲ್ಲಿ ಕೊಚ್ಚಿ ಹೋಗುತ್ತಿದ್ದ, ಬುಡದ ಮೇಲೆ ಒಂದೇ ಕಡೇ ನಿಲ್ಲಲೂ ಅಸಾಧ್ಯ. ಅವಶೇಷಗಳನ್ನೆಲ್ಲಾ ಹವಳದ ರಾಶಿಗಳು ಸುತ್ತಿಕೊಂಡು ಬಿಗಿ ಹಿಡಿದಿದ್ದವು.

1618-53ರ ಸ್ಪೇನಿನ ದಾಳಿಯಲ್ಲಿ ಮುಳುಗಿಹೋದ ಹಡುಗುಗಳ ಅಪಾರ ಸಂಪತ್ತು ಸಾಗರದಲ್ಲಿ ಹುದುಗಿ ಕೊಂಡಿದೆ. ಬಂದೂಕುಗಳು, ಪೆಟ್ಟಿಗೆಗಳು, ಅವುಗಳಿಂದ ಹೊರಚೆಲ್ಲದ ನಾಣ್ಯಗಳು, ಬಂಗಾರದ ಗಟ್ಟಿಗಳು, ಸರಗಳು, ಮುತ್ತು ಮಾಣಿಕ್ಯಗಳು, ಕಣ್ಣು ಕೋರೈಸುವಸಂಪತ್ತುಗಳಲ್ಲಿ ಕೆಲವೇ ಭಾಗವನ್ನು ಹೊರತೆಗೆದಾಗ ಅದರ ಬೆಲೆ ಐದು ಕೋಟಿ ಎಪ್ಪತ್ತು ಲಕ್ಷ ರೂಪಾಯಿಗಳಷ್ಟಾಯಿತು. ತೆಗೆದ

ತೆಗೆದ ನಾಣ್ಯಗಳ ತೂಕ 30 ಟನ್ ಆಗಿತ್ತು. ಇದರ ನೂರು ಸಾವಿರದಷ್ಟು ರಾಶಿ ಇನ್ನೂ ಕಡಲ ತಡಿಯಲ್ಲಿತ್ತು. ಸ್ಪೇನಿನ ನೌಕಾಪಡೆಯ ಬೊಕ್ಕಸದ "ಫ್ಲೊರೆನ್ಸಿಯ" ಎಂಬ ಹಡಗಿನಲ್ಲಿದ್ದ ಸಂಪತ್ತಿನ ಬೆಲೆ 65 ಕೋಟಿ ರೂಪಾಯಿಗಳಷ್ಟು. ಸಾಗರದಲ್ಲಿ ಆ ಸಿರಿಯ ನಿರ್ದಿಷ್ಟ ಸ್ಥಾನವನ್ನು ಕಂಡು ಹಿಡಿಯುವುದು ಪುನಃ ಯಾರಿಗೂ ಸಾಧ್ಯವಾಗಿಲ್ಲ.'

ಸಮುದ್ರ ಶೋಧನದಲ್ಲಿ ಬಹು ಪರಿಶ್ರಮ, ಅಪಾಯ, ಗಂಡಾಂತರಗಳಿವೆ. ಬಹು ಧೈರ್ಯ, ಸಾಹಸ, ಶಕ್ತಿ, ಬೇಕು. ಸಮುದ್ರದಲ್ಲಿ ಅಗೆತ, ಭೂಮಿಯ ಅಗೆತಕ್ಕಿಂತ ಹತ್ತರಷ್ಟು ಹೆಚ್ಚು ಖರ್ಚಿನದು. 100ಅಡಿ ಉದ್ದ, 50ಅಡಿ ಅಗಲದಷ್ಟು ಮಾತ್ರ ಸ್ಥಳವನ್ನು ಸಂಶೋಧಿಸಲು ಎಂಟು ವರ್ಷಗಳಿಂದ ದುಡಿಯುತ್ತಿದ್ದಾರೆ; ಇನ್ನೂ ಮುಗಿದಿಲ್ಲ. ನೀರಿನ ಒತ್ತಡದಲ್ಲಿ ಕೆಲವು ನಿಮಿಷಗಳು ಮಾತ್ರ ಸಾಧ್ಯ. ಆಳವು ಹೆಚ್ಚಾದಷ್ಟು ನಿಮಿಷಗಳೂ ಕಡಿಮೆಯಾಗುತ್ತವೆ. ಆಳದಲ್ಲಿ ಬಹಳ ಹೊತ್ತು ನಿಂತರೆ ಮೇಲಿರುವ ಅನೇಕ ಟನ್ ಭಾರದ ನೀರಿನ ಒತ್ತಡವು ವ್ಯಕ್ತಿಯ ರಕ್ತ, ಸ್ನಾಯುಗಳಿಗೆ ಯವಕ್ಷಾರಜನಕ ವಾಯುವನ್ನು ತುಂಬಿ, ಶರೀರ ಭಾಗಗಳು ನೋವಿನಿಂದ ಬಗ್ಗುತ್ತವೆ. ಭಗ್ನಾವಶೇಷಗಳನ್ನು ನಿಧಾನವಾಗಿ ಬಹು ಜಾಗರೂಕತೆಯಿಂದ ತೆಗೆಯಬೇಕು; ತ್ವರೆಯಿಂದ ಕೆಲಸ ಕೆಡುತ್ತದೆ.

ಸಮುದ್ರ ಬುಡದಲ್ಲಿ ಅಗೆಯುವಾಗ ವಸ್ತುಗಳನ್ನು ಗಾಳಿಯಿಂದ ಮೇಲೆತ್ತುವ ಕ್ರಮ ಅನಿವಾರ್ಯ. ದೈತ್ಯಕಾರದ ನಿರ್ವಾತ ಯಂತ್ರೋಪಕರಣವು ಮರಳು, ಮಣ್ಣು, ಚಿಕ್ಕ ವಸ್ತುಗಳನ್ನು ಮೇಲಕ್ಕೆ ಹೀರಿಕೊಂಡು, ಬೆಲೆಬಾಳುವ ವಸ್ತುಗಳನ್ನು ಸೋಸಿ, ಕೆಲಸಕ್ಕೆ ಬಾರದ ರಾಶಿಗಳನ್ನು ಸಾಗರದೊಳಗೆ ತಳ್ಳುತ್ತದೆ. ಇದಕ್ಕೆ ಬಹು ಖರ್ಚು. ಕೆಲವು ಸಾರಿ ಒಂದು ಟನ್ ಹಿಡಿಯುವಷ್ಟು ದೊಡ್ಡ ಪ್ಲಾಸ್ಟಿಕ್ ಚೀಲಗಳಲ್ಲಿ ಅಗೆದ ವಸ್ತುಗಳನ್ನು ತುಂಬಿ, ಕೆಳಗೆ ಗಾಳಿ ತುಂಬಿದರೆ, ಚೀಲಗಳು ಆಕಾಶಬುಟ್ಟಿಗಳಂತೆ ಮೇಲಕ್ಕೆದ್ದು ನೀರಿನಲ್ಲಿ ತೇಲುತ್ತವೆ. ಅವುಗಳನ್ನು ಕುಕ್ಕೆಗಳಿಗೆ ತುಂಬಿ ಹಡಗಿಗೆ ಒಯ್ಯುತ್ತಾರೆ.

ಸಾವಿರಾರು ವರ್ಷಗಳಿಂದ ಸಮುದ್ರ ಬುಡದಲ್ಲಿ ಕೊಳಿತಿದ್ದ ಪದಾರ್ಥಗಳು ಸಮುದ್ರದ ಹೊರ ಗಾಳಿಗೆ ಬಂದ ಕೂಡಲೇ ಕೆಲವು ನಿಮಿಷಗಳಲ್ಲಿ ನಾ ವಾಗುತ್ತವೆ. ಪುರಾತನ ಗಾಜಿನ ಸೀಸೆಗಳು ಗಾ ಯನ್ನು ಕಂಡ ಕೂಡಲೇ ಚೂರು ಚೂರಾಗುತ್ತ ಕವರ ಬಿಳೀ ಪುಡಿಯಾಗುತ್ತದೆ. ಪುರಾತನ ಹ ಗಳು ನೀರು ಬಿಟ್ಟು ಹೊರಗೆ ಬಂದ ಕೂ ಲೇ ಪುಡಿ ಪುಡಿಯಾಗುತ್ತವೆ. ಮರವು ಗಾಳಿ ಸೋ ಕಿದ ಕೂಡಲೇ ಅರ್ಧದಷ್ಟು ಮುದುಡಿಕೊಳ್ಳುತ್ತ "ವಾಸ್" ಎಂಬ ಹಡಗು ಸಮುದ್ರ ಬುಡದಿಂ ಎತ್ತಲ್ಪಟ್ಟು, ಮೇಲೆ ಗಾಳಿಯನ್ನು ಮುಟ್ಟಿದ ನಿ ಷದಿಂದ ಹಗಲು ರಾತ್ರಿ ಸದಾ ನೀರನ್ನು ಚಿಮುಕಿ ಲಾಗುತ್ತಿದೆ. ಸಮುದ್ರದಲ್ಲಿ ಬಹುಕಾಲ ನಿಂತ ಅನೇ ಕ ಪದಾರ್ಥಗಳನ್ನು ಕಾನ್‌ಕ್ರೀಟ್ ಅಥವಾ ಸುಣ್ಣ ದಂಥ 6–8 ಅಂಗುಲ ದಪ್ಪದಷ್ಟು ಮುಚ್ಚುತ್ತದೆ ಅದನ್ನು "ಗಾಳಿಸುತ್ತಿಗೆ"ಯಿಂದಲೂ, ಉಳಿಯಿಂದಲೂ ತೆಗೆದು ಹಾಕುತ್ತಾರೆ. ಅವಶೇಷಗಳ ಸಂದುಗಳ ಅನೇಕ ಅಪಾಯಕಾರಿ ಆಕ್ಟೋಪಸ್ ಎಂಬ ಪ್ರಾಣಿ ಗಳು ನೆಲಸಿರುತ್ತವೆ.

ಲಂಡನ್ ವಿಶ್ವ ವಿದ್ಯಾನಿಲಯವು ಸಮುದ್ರ ಶೋಧನೆ ಕಲೆಯ ಶಾಲೆಯನ್ನು ಸ್ಥಾಪಿಸಿದೆ. ಸಮುದ್ರದೊಳಗಿನ ನಾವೆಯಲ್ಲಿ ತರಬೇತಿ ಸಿಕ್ಕುತ್ತದೆ. "ಸ್ಲೆಡ್" ಎಂಬ ಸ್ವಯಂಚಾಲಕ ವಾಹನದಲ್ಲಿ ಕುಳಿತು ಸಮುದ್ರ ಬುಡವನ್ನು ಬಹು ಶೀಘ್ರವಾಗಿ ಶೋಧಿಸಲು ಸಾಧ್ಯವಾಗಿದೆ. ಒಂದು ವಿಶೇಷ ಬಗೆ ಉಪಕರಣವನ್ನು ಸಮುದ್ರದ ಆಳದಲ್ಲಿ ಎಸೆದರೆ ಅದರ ಬಳಿ ಯಾವುದಾದರೂ ವಸ್ತುವಿದ್ದರೆ ಸಿಳ್ಳು ಹಾಕುತ್ತದೆ. ಇನ್ನೊಂದು ಸೂಕ್ಷ್ಮ ಸಲಕರಣೆಯು ಸಾಧಾರಣ ಕಲ್ಲು ಚೂರನ್ನೂ, ಬೆಲೆ ಬಾಳುವ ಅಮೃತ ಶಿಲೆಯನ್ನೂ ಪ್ರತ್ಯೇಕಿಸಬಲ್ಲದು. ನೀರಿನ ಶ್ವಾಸಕೋಶಗಳಿಂದ 500 ಅಡಿ ಆಳಕ್ಕೂ ಧುಮುಕಲು ಪ್ರಯೋಗಗಳಾಗುತ್ತಿವೆ. ಸಮುದ್ರ ಶೋಧನೆಯಲ್ಲಿ ದೊರೆತ ಪ್ರಾಚೀನ ವಸ್ತುಗಳನ್ನೂ ವಿಸ್ಮಯಗಳನ್ನೂ ಶೇಖರಿಸಿ ಸಮುದ್ರದೊಳಗೇ ಒಂದು ವಸ್ತುಸಂಗ್ರಹಾಲಯವನ್ನು ನಿರ್ಮಿಸಿ ಅಲ್ಲಿ ಪ್ರದರ್ಶಿಸಬೇಕೆಂದೂ, ವೀಕ್ಷಕರು ನೀರಿನ ಶ್ವಾಸಕೋಶಗಳನ್ನು ಧರಿಸಿ ಅಲ್ಲಿಗೆ ಹೋಗಬೇಕೆಂದೂ ಕೆಲವರ ಸಲಹೆ!

ಧಾರ್ಮಿಕ ಶಿಕ್ಷಣ

# ಯುವಕರಿಗೇಕೆ ಹಿಡಿಸುತ್ತಿಲ್ಲ?

—'ಕಾವ್ಯಜೀವಿ'

"ಧರ್ಮ ಭಾರತದ ಬೆನ್ನೆಲುಬು" ದೇಶದ ಉದ್ದಗಲಕ್ಕೂ ಸಂಚರಿಸುವಾಗ ಮನಗಂಡ ಈ ಸತ್ಯವನ್ನು ಘಂಟಾಘೋಷವಾಗಿ ಸಿಂಹ ವಾಣಿಯಿಂದ ಘರ್ಜಿಸಿ ಆತ್ಮವಿಶ್ವಾಸದಿಂದ ಹೇಳಿದವರು ಸ್ವಾಮಿ ವಿವೇಕಾನಂದರು.

"Religion is the back bone of India. India cannot live without it."

ಈ ಬೆನ್ನೆಲುಬನ್ನು ಉಳಿಸುವ, ಪುಷ್ಟಿಗೊಳಿಸುವ ಇಚ್ಛೆಯಿಂದಲೇ ಅವರು ಶ್ರೀ ರಾಮಕೃಷ್ಣ ಮಹಾ ಸಂಘ, ಬೇಲೂರು ಮಠಗಳನ್ನು ಸ್ಥಾಪಿಸಿದರು. ಯೋಗ್ಯ ಶಿಷ್ಯರಿಗೆ ತರಬೇತಿ ನೀಡಿ ಅವರನ್ನು ಭಾರತದ ಹಲವು ಭಾಗಗಳಿಗೆ, ಸಿಂಹಳ, ಅಮೇರಿಕೆಗಳಿಗೆ, ಕಳುಹಿಸಿಕೊಟ್ಟರು. ಹಲವು ಸಂಪುಟಗಳಾಗುವಷ್ಟು ಸತ್ವಪೂರ್ಣ ಉಪನ್ಯಾಸಗಳನ್ನಿತ್ತರು. ಈ ಎಲ್ಲದರ ಪರಿಣಾಮವಾಗಿ ಪಾಶ್ಚಾತ್ಯ ಪ್ರಭಾವದ ಬಿರುಗಾಳಿಗೆ ಸಿಕ್ಕಿ ಮುಳುಗುತ್ತಿದ್ದ ಹಿಂದೂ ಸಂಸ್ಕೃತಿಯ ಹಡಗು ಮತ್ತೆ ಬಲವಾದ ಆಸೆಯೊಂದಿಗೆ ಮೇಲೇರುವಂತಾಯಿತು. ಸಹಸ್ರ ಸಹಸ್ರ ಜನ ಅದರ ಬೆಳಕು ಕಂಡರು, ಸವಿಯುಂಡರು.

ಕಾಲ ಸರಿಯುತ್ತಿದೆ, ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ನಾಡನ್ನು ಮುನ್ನಡೆಸಿದ ಅನೇಕ ಭವ್ಯ ಚೇತನಗಳೀಗ ಮರೆಯಾಗಿವೆ. ನಮ್ಮದೇ ರಾಜ್ಯ, ಗಣ ರಾಜ್ಯ, ಅಸ್ತಿತ್ವಕ್ಕೆ ಬಂದು ಬೆಳ್ಳಿ ಹಬ್ಬ ಆಚರಿಸಿದೆ.

ಏತನ್ಮಧ್ಯೆ ವಿಜ್ಞಾನವೂ ಬಹಳಷ್ಟು ಮುಂದು ವರೆದಿದೆ. ಭಾರತವೂ ಅಣು ಶಕ್ತಿ ರಾಷ್ಟ್ರ ಆಗಿದೆ. ಮುಪ್ಪನ್ನು ತಡೆಯಬಲ್ಲ, ಹವಾಮಾನವನ್ನೇ ನಿಯಂತ್ರಿಸಬಲ್ಲ ವಿಧಾನಗಳನ್ನು ಕಂಡುಹಿಡಿಯುವಲ್ಲಿಯೂ ವಿಜ್ಞಾನ ಸಾಕಷ್ಟು ಸಫಲವಾಗುತ್ತಿದೆ.

ಈ ವಿಶಾಲ, ವಿಕ್ಷುಬ್ದ, ಬದಲಾಗುತ್ತಿರುವ ವಾತವರಣದ ಹಿನ್ನೆಲೆಯಲ್ಲಿ ನಾವಿಂದು ನಮ್ಮ ಯುವಜನತೆಯನ್ನು, ನಮ್ಮ ಧಾರ್ಮಿಕತೆಯನ್ನು ನಿರ್ಮಮಕಾರದಿಂದ, ನಿಷ್ಪಕ್ಷಪಾತದಿಂದ ಒರೆ ಹಚ್ಚಿ ನೋಡಬೇಕಾಗಿದೆ. ಎರಡೂ ಕಡೆ ಇರುವ ಟೊಳ್ಳುತನವನ್ನು ನಿರ್ದಾಕ್ಷಿಣ್ಯವಾಗಿ ತೆಗೆದುಹಾಕಿ, ಒಂದು ಸತ್ವದಲ್ಲಿ ಇನ್ನೊಂದು ಮಹಾಸತ್ವವನ್ನು ಸಮಾವೇಶಗೊಳಿಸುವ ಪ್ರಯತ್ನ ಮಾಡಬೇಕು. ಇಲ್ಲದಿದ್ದರೆ ಯುವಜನತೆಯ ಉತ್ಸಾಹೀ ಸತ್ವ ನಾಶಹೊಂದುತ್ತದೆ; ಧಾರ್ಮಿಕ ಸತ್ವಕ್ಕೆ ಕ್ಷಯ ತಗಲುತ್ತದೆ.

ಇಂದಿನ ಯುವಕರನ್ನು ಧಾರ್ಮಿಕತೆಯ ಬಗ್ಗೆ ಪ್ರಶ್ನಿಸಿದರೆ ಬರುವ ಪ್ರತಿಕ್ರಿಯೆ ಏನು ? "ನಮಗೆ ಧರ್ಮದಲ್ಲಿ, ಜಾತಿ ಮತಗಳಲ್ಲಿ ನಂಬಿಕೆ ಇಲ್ಲ," ನಮಗೆ ದೇವರು, ವಿಗ್ರಹ ಪೂಜೆ, ಉತ್ಸವ, ಇವೆಲ್ಲ ದಂಡ; ಸಮಾಜಕ್ಕೆ ಸೇವೆ ಮಾಡಿದರೆ ಸಾಕು. ಇವೆಲ್ಲ ಬೇಕಾಗಿಲ್ಲ." "ಮಾಂಸ ತಿನ್ನುವುದು ತಪ್ಪಲ್ಲ. ಹೆಂಡ ಕುಡಿಯುವುದು ತಪ್ಪಲ್ಲ. ಹುಡುಗ–ಹುಡುಗಿಯರು ಒಬ್ಬರನ್ನೊಬ್ಬರು ನೋಡುವುದರಲ್ಲಿ ಏನು ತಪ್ಪು ?" "ಫ್ಯಾಷನ್ನಿನಲ್ಲಿ ಏನಿದೆ ? After all, it is common."

ಇಷ್ಟೇ ಅಲ್ಲ, ಅವರು ಇನ್ನೂ ಅನೇಕ ಪ್ರಶ್ನೆ ಕೇಳುತ್ತಾರೆ. "ಆತ್ಮ ಎಲ್ಲಿದೆ ? ಜೀವವನ್ನೂ ನಾವೇ ಸೃಷ್ಟಿಸಬಹುದೆಂದು ಒಪಾರಿನ್‌ನ ಸಂಶೋಧನೆ ತೋರಿಸಿಕೊಡುತ್ತದೆ. ಇದಕ್ಕೇನು ಹೇಳ್ತೀರ ? ಪ್ರಪಂಚ

[25 ನೇ ಪುಟನೋಡಿ]

# ಧಾರ್ಮಿಕ - ಕಾರ್ಮಿಕರ ಗುಹಾಲಯಗಳು

—ಕೃಷ್ಣಾನಂದ ಕಾಮತ

ತಾನು ಮಂಗನಿಗಿಂತ ಬೇರೆ ಪ್ರಾಣಿ ಎನಿಸಿದ್ದರಿಂದ ಮಾನವನೂ ಮರದಿಂದ ಕೆಳಗಿಳಿದು, ಮಳೆ ಗಾಳಿ ಬಿಸಿಲುಗಳಿಂದ ಸಂರಕ್ಷಿಸಿಕೊಳ್ಳಲು ನಿಸರ್ಗ–ನಿರ್ಮಿತ ಗುಹೆಗಳ ಆಶ್ರಯ ಪಡೆದ ನಂತರದ ಶತವಯಾಗಳಲ್ಲಿ ವಿವಿಧ ಆಯುಧಗಳನ್ನು ಬಳಸಿ ತನ್ನ ಗೃಹಗಳನ್ನು ತಾನೇ ನಿರ್ಮಿಸಿಕೊಳ್ಳಲಾರಂಬಿಸಿದ. ಕ್ರಿಸ್ತ ಪೂರ್ವ ಎರಡನೇ ಮತ್ತು ಒಂದನೆಯ ಶತಮಾನಗಳಲ್ಲಿ ಬೌದ್ಧಮತದ ಅನುಯಾಯಿಗಳು ಭಾರತದ ತುಂಬ ಕಾಣಿಸಿಕೊಂಡರು. ಜನಜಂಗುಳಿಯಿಂದ ದೂರವಿದ್ದು, ಧಾರ್ಮಿಕ ಚಟುವಟಿಕೆಗಳು ನಿರಾತಂಕವಾಗಿ ನಡೆಯುವುದಕ್ಕಾಗಿ ಗುಹಾಲಯಗಳನ್ನು ನಿರ್ಮಿಸುವ ಪರಂಪರೆ ಪ್ರಾರಂಭಿಸಿದರು. ತ್ರಿಂಬಕ–ಸೈಹ್ಯಾದ್ರಿಗಳ ಎತ್ತರವಾದ ಪರ್ವತ ಶ್ರೇಣಿಗಳಲ್ಲಿ, ನೀರು ಮತ್ತು ಬನ ಸಿರಿಗಳ ಅನುಕೂಲವಿದ್ದಲ್ಲಿ ದೊಡ್ಡ ಶಿಲೆಗಳನ್ನು ಕೊರೆದು ಧಾರ್ಮಿಕ ಚಟುವಟಿಕೆಗಳಿಗಾಗಿ ಚೈತ್ಯಾಲಯಗಳನ್ನೂ, ವಾಸಕ್ಕಾಗಿ ವಿಹಾರಗಳನ್ನೂ ನಿರ್ಮಿಸಿದರು. ಮೊದಲಲ್ಲಿ ಕೊಠಡಿಯ ಗುಹಾಲಯಗಳನ್ನು ನಿರ್ಮಿಸಿದರೂ ನಂತರದ ಶತಕಗಳಲ್ಲಿ ಇಂದಿನ ಯಾವುದೇ ಬೃಹತ್ ಕಟ್ಟಡವನ್ನು ನಾಚಿಸುವಂತಹ, ಹಲವಾರು ಕೊಠಡಿಗಳುಳ್ಳ, ಎರಡು-ಮೂರು ಮಹಡಿಗಳ, ಅಪೂರ್ವ ಚಿತ್ರ ಮತ್ತು ಶಿಲ್ಪಗಳ ಕಲಾಕೃತಿಗಳುಳ್ಳ ಗುಹಾಲಯಗಳನ್ನು ನಿರ್ಮಿಸಿದರು. ಬೌದ್ಧರ ಮೇಲ್ಪಂಕ್ತಿಯನ್ನನುಸರಿಸಿ ಇತರ ಮತದ ಗುಹಾಲಯಗಳೂ ಕಾಣಿಸಿಕೊಂಡವು. ಶಾತವಾಹನರ ನಂತರ ಬಾದಾಮಿ ಚಾಲುಕ್ಯರ, ರಾಷ್ಟ್ರಕೂಟರ ಕಾಲದ ಗುಹಾಲಯಗಳೂ ಅಪೂರ್ವ ಕಲಾಕೃತಿಗಳ ಮಾದರಿಗಳಾಗಿ ಉಳಿದುಕೊಂಡಿವೆ. ಕರ್ನಾಟಕದ ಬಾದಾಮಿಯ ಗುಹಾಲಯಗಳು ಹೆಸರುವಾಸಿಯಿದ್ದಂತೆ ಮಹಾರಾಷ್ಟ್ರದ ಅಜಂತ ಎಲ್ಲೋರಗಳು ವಿಶ್ವವಿಖ್ಯಾತವಾದವುಗಳು. ಬೌದ್ಧ ಜೈನ, ಶೈವ, ವೈಷ್ಣವ ಗುಹೆಗಳು ಎಲ್ಲೋರದಲ್ಲಿ ಜೊತೆ ಜೊತೆಗಿದ್ದಂತೆ ಶಿಲ್ಪದ ಅಚ್ಚರಿಯಾಗಿದ್ದ ಏಕ ಶಿಲಾನಿರ್ಮಿತ ಕೈಲಾಸ ಮಂದಿರವೂ ಇಲ್ಲಿದೆ. ಕೊಂಕಣದಲ್ಲಿ ಎಲಿಫಂಟಾ ಕಾನೇರಿ, ಜೋಗೇಶ್ವರಿ, ಕಾರ್ಲಾ, ಭಾಜಾಗಳಲ್ಲಿಯವು ಪ್ರೇಕ್ಷಣೀಯ ಗುಹಾಂತರ್ಗತ ದೇವಸ್ಥಾನಗಳು. ಧಾರ್ಮಿಕರು ಕಾಶಿ ರಾಮೇಶ್ವರ, ತಿರುಪತಿಗಳಿಗೆ ಹೋಗಿ ಬಂದು ಜೀವನದಲ್ಲಿ ದೈನ್ಯತೆ ಕಾಣಲು ಯತ್ನಿಸಿದರೂ ಗುಹಾಲಯಗಳು ಜನಜಂಗುಳಿಯಿಂದ ದೂರವಿದ್ದು ಪ್ರಶಾಂತ ಮತ್ತು ಪವಿತ್ರ ಸ್ಥಳಗಳಾಗಿದ್ದರೂ ಅವುಗಳತ್ತ ನಾವು ಅಷ್ಟು ಲಕ್ಷ್ಯ ಪೂರೈಸದೇ ಇರುವುದು ದುರ್ದೈವದ ಸಂಗತಿ. ಅದೇ ಕಲೆಯ ಬೆಲೆ ಬಲ್ಲ ಪಾಶ್ಚಾತ್ಯ ಪ್ರವಾಸಿಗಳು, ಯಾವ ಆಧುನಿಕ ಸಲಕರಣೆಗಳನ್ನೂ ಬಳಸದೇ ಇಂತಹ ಬೃಹದ್ ಕಲಾಕೃತಿಗಳನ್ನು ಬರಿಗೈಯಿಂದ ಹೇಗೆ ಮಾಡಿದರೆಂದು ಕಲ್ಪಿಸಲಾಗದೇ ಮೂಕರಾಗಿ ಹೋಗುತ್ತಾರೆ. ಅವುಗಳಲ್ಲಿ ಇದ್ದ ಬಿದ್ದ ಶಿಲ್ಪ ಮತ್ತು ಉಳಿದುಕೊಂಡ ಕೆಲವೇ ಭಿತ್ತಿ-ಚಿತ್ರಗಳು ಜಗತ್ತಿನ

ಅಪೂರ್ವ ಕಲಾಕೃತಿಗಳ ಮಾದರಿಗಳು.

ಈ ಹಲವಾರು ಗುಹಾಲಯಗಳನ್ನು ಮುಟ್ಟ ಬೇಕಾದರೂ ನೂರಾರು ಮೆಟ್ಟಲುಗಳನ್ನು ಏರ ಬೇಕು. ಇಲ್ಲವೇ ಜಾರದಂತೆ ಜಾಗರೂಕತೆಯಿಂದ ಕಿರಿದಾರಿಯನ್ನು ತುಳಿಯಬೇಕು. ಮೇಲೆ ಹೋಗುತ್ತ ಮಂದ ಮಾರುತ ಬೀಸಿದಾಗ, ದೂರದೂರದ ವ್ಯಕ್ತಿಗಳು, ನೀರು ಮತ್ತು ಊರುಗಳನ್ನು ಕಂಡಾಗ ಮನಸ್ಸಿಗೆ ಆಹ್ಲಾದವಾಗುತ್ತದೆ. ದೂರದ ತಗ್ಗು-ದಿನ್ನೆ, ಕಳ್ಳಿ-ಮುಳ್ಳುಗಳಿಂದ ಕೂಡಿದ ಬೆಟ್ಟ ಹತ್ತಿರ ಬಂದಾಗ ಬೇರೆಯೇ ರೂಪ ತಾಳಿ ಕಣ್ಣುಮುಂದೆ ಬಂದು ನಿಲ್ಲುತ್ತವೆ. ಅಲ್ಲೊಂದು ಇಲ್ಲೊಂದು ಇಲಿಯ ಬಿಲಗಳಂತೆ ಭಾಸವಾಗುವ ಗುಹಾಲಯಗಳ ಒಳಗೆ ಹೊಕ್ಕಾಗ ಬೇರೆಯೇ ಲೋಕವನ್ನು ಪ್ರವೇಶಿಸಿದ ಭಾಸವಾಗುತ್ತದೆ. ಇಕ್ಕೆಲಗಳಲ್ಲಿ ಸಾಮಾನುಗಳನ್ನು ಸಂಗ್ರಹಿಸಲು ಉಗ್ರಾಣದ ಕೋಣೆಗಳು, ನಂತರ ವಿಶಾಲವಾದ ಹಜಾರ.

ಅದು ಚೈತನ್ಯ ಇಲ್ಲವೇ ಪೂಜಾಸ್ಥಾವಾಗಿದ್ದರೆ ಎದುರಿಗೇ ಬುದ್ಧ ಜಿನ ಶಿವ ಇಲ್ಲವೇ ವಿಷ್ಣುವಿನ ಭವ್ಯಪ್ರತಿಮೆ. ಬೆಳಕಿಗಾಗಿ ಅಲ್ಲಲ್ಲಿ ನಿರ್ಮಿಸಿದ ಕಂಡಿಗಳಿಂದ ತೂರಿಬರುವ ಬೆಳಕು ಪ್ರತಿಮೆಗಳಿಗೊಂದು ಬೆಡಗು ನೀಡುತ್ತದೆ. ಅದು ವಿಹಾರವಾಗಿದ್ದರೆ ಭಿಕ್ಷುಕರಿಗೆ, ಧಾರ್ಮಿಕರಿಗೆ ಪ್ರವಚನಕ್ಕಾಗಿ ದೊಡ್ಡ ಹಜಾರ, ವಾಸಕ್ಕಾಗಿ ಕೊಠಡಿಗಳೂ ಕಾಣಸಿಗುತ್ತವೆ. ಹಜಾರದ ಗೋಡೆಗೆ, ಕಂಬ, ಬಾಗಿಲು, ಮಾಡುಗಳನ್ನು ಕೂಡ ಶಿಲ್ಪ ಚಿತ್ರಗಳಿಂದ ಅಲಂಕರಿಸಿದರೆ, ಕೊಠಡಿಗಳಲ್ಲಿ ದೀಪವಿಡಲು ಮಾಡ, ಕೂಡ್ರಲು, ಮಲಗಲು ಬಳಸುವಂತೆ ಕಲ್ಲಿನ ಬಾತುಗಳನ್ನು ಮಾಡಿದ್ದಾರೆ. ಆಶ್ಚರ್ಯದ ಮಾತೆಂದರೆ ಅಷ್ಟು ಎತ್ತರದ ಮೇಲೂ ಪ್ರತಿಸ್ಥಳದಲ್ಲಿ ಶುಭ್ರನೀರಿನ, ಆಳವಿಲ್ಲದ ಬಾವಿಗಳನ್ನು ಕಟ್ಟಿದ್ದಾರೆ. ಅಲ್ಲಿ ರಚಿತವಾದ ಪ್ರತಿಯೊಂದು, ಶಿಲ್ಪ, ಚಿತ್ರಗಳನ್ನು ನೋಡುತ್ತ ನಿಂತಾಗ ಭಯ ಭಕ್ತಿಗಳು ನಮ್ಮನ್ನು ಆವರಿಸಿ ಬಿಡುತ್ತವೆ.

ಯಾವ ಆಯುಧಗಳನ್ನೂ ಬಳಸದೆ ತಮ್ಮ ದವಡೆಗಳನ್ನೇ ಬಳಸಿ ಕೊರಡಿನಲ್ಲಿ ಗುಹಾಲಯಗಳನ್ನು ಕೊರೆಯುವ ಕಾರ್ಮಿಕ ಕೀಟಗಳಿವೆ. ಇವುಗಳಿಗೆ ತೊಗಟೆ ಕೀಟ ಇಲ್ಲವೇ ಕೊರಡು ಕೀಟ ಎಂಬ ಅನ್ವರ್ಥಕ ಹೆಸರನ್ನು ಧಾರಾಳವಾಗಿ ಕೊಡಬಹುದು, ಧಾರ್ಮಿಕರು ಗುಹಾಲಯಗಳನ್ನು ನಿರ್ಮಿಸುವ ಕಾರ್ಯವನ್ನು ಕ್ರಿಸ್ತ ಪೂರ್ವ ಎರಡನೆಯ ಶತಮಾನದಿಂದ ಪ್ರಾರಂಭಿಸಿ ಹತ್ತನೆಯ ಶತಮಾನದವರೆಗೆ ಎಂದರೆ ಸುಮಾರು ಹನ್ನೆರಡು ಶತಮಾನಗಳವರೆಗೆ ನಡೆಸಿಕೊಂಡು ಬಂದರೆ ಈ ಕಾರ್ಮಿಕ ಜೀವಿಗಳು, ಮೂರು ನೂರು ಲಕ್ಷ ವರ್ಷಗಳ ಹಿಂದೆ ರೂಢಿಸಿಕೊಂಡ ಈ ಕಲೆಯನ್ನು ಇಂದಿಗೂ ಮುಂದುವರಿಸಿಕೊಂಡು ಬಂದಿವೆ! ಹೆಣ್ಣು ಕೀಟ ಹಾರುತ್ತ ಓಡುತ್ತ ತನ್ನ ಗೃಹ – ನಿರ್ಮಾಣಕ್ಕೆ ಬೇಕಾಗುವ ಮರವೊಂದನ್ನು ಆರಿಸಿ, ಗುಂಡು ಸೂಜಿ ಸೇರಬಹುದಾದಂತಹ ಒಂದು ತೂತನ್ನು ನಿರ್ಮಿಸಿ ಕೊಠಡಿಯಲ್ಲಿ ಸೇರುತ್ತದೆ. ಹೊರ ನೋಟಕ್ಕೆ ಏನೂ ಗೋಚರಿಸದಿದ್ದರೂ ಗುಹಾಲಯದಲ್ಲಿ ಸುಬದ್ಧವಾದ ಹಜಾರ, ಕೊಠಡಿಗಳನ್ನು ನಿರ್ಮಿಸುವುದರಿಂದ ಅವು ಧಾರ್ಮಿಕರು ಕಟ್ಟಿದ ಗುಹೆಗಳನ್ನು ಹೋಲುತ್ತವೆ. ದ್ವಾರದಿಂದ ಮುಂದೆ ಹೋದೊಡನೆ ಹಜಾರ, ಅದಕ್ಕೆ ಹೊಂದಿ ಹಲವಾರು ವಾಸದ ಕೊಠಡಿಗಳು, ಮರಿಗಳಿಗಾಗಿ ಪುಟ್ಟ ಕೊಠಡಿಗಳು. ಸ್ತ್ರೀಕೀಟ ಕೊರಡನ್ನು ಕೊರೆದು ಹುಡಿಮಾಡಿ ಪ್ರವೇಶದ್ವಾರದಿಂದ ಹೊರಗೆ ಹಾಕುತ್ತಿರುತ್ತದೆ. ದುಡಿಯುವ ಈ ನಾರಿಯಲ್ಲಿ ಅನುರಕ್ತನಾಗಿ ಕೀಟಯುವಕನೊಬ್ಬ ಈ ಕೊರಡಿನ ಗುಹಾಲಯ ಸೇರಿ ಬೇರೊಬ್ಬರು ಹಿಂಬಾಲಿಸದಂತೆ ದ್ವಾರವನ್ನು ಹುದಿಯಿಂದ ಭದ್ರವಾಗಿ ಮುಚ್ಚಿ ಸರಸ-ಸಲ್ಲಾಪ ಮಾಡುತ್ತ ಸ್ತ್ರೀಕೀಟವನ್ನು ತನ್ನ ಮಕ್ಕಳ ತಾಯಾಗುವಂತೆ ಮನವಲಿಸುವನು ಪತಿ-ಪತ್ನಿಯರು ಸೇರಿ ತಮ್ಮ ಭಾವೀ ಪೀಳಿಗೆಗಳಿಗಾಗಿ ವಿಶೇಷ ಕೊಠಡಿಗಳ ನಿರ್ಮಾಣದಲ್ಲಿ ತೊಡಗುವುವು. ಪ್ರತಿಯೊಂದು ಖಾನೆಯಲ್ಲಿಯೂ ಮೊಟ್ಟೆಯಿಟ್ಟು ತಾಯಿಕೀಟ ಕಟ್ಟಗೆಯ ಹುಡಿಯಿಂದ ಮುಚ್ಚಿಬಿಡುವುದು. ತತ್ತಿಗಳಿಂದ ಹೊರಬಂದ ಮರಿಗಳು ಈ ಹುಡಿಯನ್ನೇ ಭಕ್ಷಿಸಿ ಬೆಳೆಯುವುವು. ಕೀಟಗಳು ಕೆಲ ಕೋಣೆಗಳಲ್ಲಿ ಬೂರಸು ಬೆಳೆಸಿ ಅದನ್ನೇ ಆಹಾರವೆಂದು ಸೇವಿಸುವುದೂ ಉಂಟು. ಅಜಂತ ಗುಹೆಗಳ

[17ನೇ ಪುಟನೋಡಿ]

# ವಾಕ್ ಭ್ರಂಶ

— ಬಿ. ಸುಬ್ರಾಯ ಅಡಿಗ.

ನಮ್ಮ ದೇಹದಲ್ಲಿ ಮೆದುಳಿಗೆ ಅತ್ಯಧಿಕ ಮಹತ್ವವಿದೆ. ನಮ್ಮ ಬದುಕಿನ ಎಲ್ಲ ಮಹತ್ವದ ಕಾರ್ಯಗಳ ಸಂಚಾಲನೆಯನ್ನು ಮೆದುಳೇ ಮಾಡುತ್ತದೆ. ಈ ಅತಿ ಪುಟ್ಟಭಾಗದಲ್ಲಿ ಹಲವಾರು ಸ್ಥಳಗಳಿದ್ದು ಅವುಗಳ ಮೂಲಕ ಮಾತಾಡುವ, ಕೇಳುವ, ಬರೆಯುವ, ಹಾಡುವ, ತಿಳಿಯುವ, ಲೆಕ್ಕದ ಪ್ರಶ್ನೆಗಳನ್ನು ಬಿಡಿಸುವ ಮೊದಲಾದ ಕಾರ್ಯ ಕಲಾಪಗಳು ನಡೆಯುತ್ತವೆ.

ಪ್ರಖ್ಯಾತ ವಿಜ್ಞಾನಿ ಗಾಲ್ ಮೆದುಳಿನ ಮುಂಬಾಗದಲ್ಲಿ ಲಲಾಟದ ಹಿಂದೆ ಬೌದ್ಧಿಕ ಶಕ್ತಿಗಳಿವೆ; ಮಧ್ಯಭಾಗದಲ್ಲಿ ನೈತಿಕ ಗುಣಗಳು ಇರುತ್ತವೆ ಮತ್ತು ಹಿಂಭಾಗದಲ್ಲಿ ಪಾಶವಿಕಪ್ರವೃತ್ತಿಗಳಿವೆ ಎಂದು ೧೮೦೦ ರಲ್ಲೇ ಪ್ರತಿಪಾದಿಸಿದ್ದನು. ಮೆದುಳಿನ ಮೇಲ್ಭಾಗದಲ್ಲಿ ಶ್ರದ್ಧೆ ಹಾಗೂ ಲಘುಮಸ್ತಿಷ್ಕದಲ್ಲಿ ಕಾಮಪ್ರವೃತ್ತಿ ಇದೆಯೆಂದು ಸೂಚಿಸಿದ್ದನು.

ಕಾರ್ಟೆಕ್ಸ್‌ದ ಒಂದು ವಿಶೇಷಭಾಗಕ್ಕೆ ಯಾವುದೇ ರೀತಿಯ ಪೆಟ್ಟುತಗಲಿದರೂ ಮನುಷ್ಯ ಮಾತಾಡುವುದನ್ನು ನಿಲ್ಲಿಸುತ್ತಾನೆ-ಎಂದು ಪಾಲ್ ಬ್ರೋ ೧೮೬೧ ರಲ್ಲೇ ನುಡಿದಿದ್ದನು. ಕಾರ್ಟೆಕ್ಸದ ವಿಶೇಷ ಭಾಗಗಳಲ್ಲಿ ವಿದ್ಯುತ್ ಸಂವೇದನೆ ತಲುಪಿಸುವುದರಿಂದ ದೇಹದ ವಿವಿಧ ಭಾಗಗಳಲ್ಲಿ ಚಟುವಟಿಕೆ ಆರಂಭವಾಗುವುದೆಂದು ಫ್ರೀಶ್ ಹಾಗೂ ಹಿಟಜಿಕ್ (೧೮೭೦)ರ ಪ್ರಯೋಗಗಳಿಂದ ತಿಳಿದುಬರುತ್ತದೆ.

ಆಧುನಿಕ ವಿಜ್ಞಾನ ಈ ಎಲ್ಲ ಹಳೆಯ ಮಾನ್ಯತೆಗಳನ್ನು ನಿರಾಕರಿಸುತ್ತ ಮುಂದುವರಿದಿದೆ. ಮೆದುಳಿನಲ್ಲಿ ಬೇರೆ ಬೇರೆ ಅಂಗಗಳಿಂದ ದೊರೆಯುವ ಸೂಚನೆಗಳ ಸಂಯೋಜನೆ ಎಲ್ಲಿ ನಡೆಯುವುದೆಂದು ಪತ್ತೆ ಹಚ್ಚುವುದು ನಿಜಕ್ಕೂ ಕಷ್ಟದ ಕೆಲಸವೆನಿಸಿದೆ. ಈ ಬಗ್ಗೆ ಕರಾರುವಕ್ಕಾಗಿ ನುಡಿಯಲು ಇನ್ನೂ ಸಾಕಷ್ಟು ಶೋಧ ನಡೆಯಬೇಕಾಗಿದೆ.

ವಾಕ್‌ಭ್ರಂಶ (ಎಫೇಸಿಯ) ಹೆಚ್ಚಾಗಿ ಪಕ್ಷಾಪಾತ (ಪೆರಾಲಿಸಿಸ್)ದಿಂದ ಉಂಟಾಗುತ್ತದೆ. ಇತ್ತೀಚಿಗೆ ಈ ಕಾಯಿಲೆ ಸರ್ವಸಾಧಾರಣವಾಗಿದೆ. ಈ ಕಾಯಿಲೆಯಿಂದ ರೋಗಿಯು ವಾಕ್‌ಶಕ್ತಿ ಹಾಗೂ ಭಾಷೆಯನ್ನುಪಯೋಗಿಸುವ ಶಕ್ತಿ ಅಂಶಿಕವಾಗಿಯೋ ಪೂರ್ಣವಾಗಿಯೋ ನಷ್ಟವಾಗುತ್ತದೆ.

ರೋಗದ ಲಕ್ಷಣಗಳು.

ಇದೊಂದು ವಿಚಿತ್ರ ಸಂಕಟ. ಇದರಲ್ಲಿ ಸಾರ್ಥಕ ಹಾಗೂ ಸುಸಂಬದ್ಧ ವಾಕ್ಯನುಡಿಯುವ ಮತ್ತು ಹೇಳಿದ್ದನ್ನು ಅರ್ಥಮಾಡಿಕೊಳ್ಳುವ ಶಕ್ತಿ ಕುಂಠಿತವಾಗಿರುತ್ತದೆ. ಅಖಿಲ ವಿಷಯವನ್ನು ಓದಲೂ ಅರ್ಥಮಾಡಲೂ ಕಷ್ಟವಾಗುತ್ತದೆ. ಪಕ್ಷಾಪಾತದಿಂದಾಗಿ ರೋಗಿ ಹೆಚ್ಚಾಗಿ ಬರೆಯುವ ಶಕ್ತಿಯನ್ನು ಕಳೆದುಕೊಳ್ಳುತ್ತಾನೆ.ಆಕಸ್ಮಾತ್ ಇಂಥ ಸ್ಥಿತಿ ತಲೆದೋರಿದಾಗ ರೋಗಿ ಹಾಗೂ ಅವನ ಇಡೀ ಪರಿವಾರ ಚಿಂತೆಯಾಗುವುದು ಸಹಜವಷ್ಟೇ.

ರೋಗಿಯ ಶಾರೀರಿಕ ಶಕ್ತಿ ಕುಗ್ಗುತ್ತದೆ. ಪರಿಣಾಮವಾಗಿ ಅವನ ಬಲಭಾಗ ಮುಖ್ಯವಾಗಿ ಕೈಕಾಲುಗಳು ವ್ಯರ್ಥವಾಗುತ್ತವೆ. ಇನ್ನೊಂದೆಡೆ, ಭಾಷಾಸಂಬಂಧಿ ಹಾನಿಯಿಂದಾಗಿ, ಅವನ ಮಾನಸಿಕ ಹಾಗೂ ಶಾರೀರಿಕ ಸ್ಥಿತಿಯಲ್ಲಿ ಸಾಕಷ್ಟು ದೌರ್ಬಲ್ಯ ಉಂಟಾಗುತ್ತದೆ. ಆತ ತನ್ನ ಜ್ಞಾನಬುದ್ಧಿಯನ್ನು ಕಳೆದುಕೊಳ್ಳುತ್ತಾನೆ.

ಸಾಮಾನ್ಯವಾಗಿ ಈ ಎಲ್ಲ ರೋಗಿಗಳಲ್ಲೂ ವಾಕ್‌ಭ್ರಂಶದ ಎರಡು ರೂಪಗಳನ್ನು ಕಾಣಬಹುದು. ಮೊದಲನೆಯದು ಬೋಧಕ್ಕೆ ಸಂಬಂಧಿಸಿದ ವಾಕ್‌ಭ್ರಂಶ. ಬೋಧಕ್ಕೆ ಸಂಬಂಧಿಸಿದ ವಾಕ್‌ಭ್ರಂಶದಲ್ಲಿ ಕೇಳಿದಮಾತನ್ನು ಅರಿಯುವುದಕ್ಕೆ ಬರೆದ ವಿಷಯ

ವನ್ನು ಓದಿ ಅರ್ಥಮಾಡಿಕೊಳ್ಳುವುದಕ್ಕೂ ಕಷ್ಟವಾಗುತ್ತದೆ. ಕಾರ್ಯಸಂಬಂಧಿ ವಾಕ್‌ಭ್ರಂಶದಲ್ಲಿ ಬಾಯಿಯಿಂದ ಶಬ್ದಗಳನ್ನು ಉಚ್ಚರಿಸುವುದಕ್ಕೂ ಅವನ್ನು ವಾಕ್ಯರೂಪದಲ್ಲಿ ಹೇಳುವುದಕ್ಕೂ ಶಬ್ದ ಅಥವಾ ವಾಕ್ಯಗಳನ್ನು ಬರೆಯುವುದಕ್ಕೂ ಕಷ್ಟ ಎನಿಸುತ್ತಿದೆ. ಈ ರೀತಿ ಕಾಯಿಲೆಯಲ್ಲಿ ಹೆಚ್ಚಾಗಿ ಪೂರ್ವಕ್ರಿಯಾಧಿಷ್ಠಾನ (ಪ್ರೀ ಮೋಟರ್ ಏರಿಯಾ) ದ ಕೆಳಭಾಗಕ್ಕೆ ಪೆಟ್ಟು ತಗಲಿದುದು ತೋರಿಬರುತ್ತದೆ.

ಭಾಷಾಸಂಬಂಧಿ ಕ್ರಿಯೆಗಳ ನಿಯಂತ್ರಣ ಮೆದುಳಿನ ಒಂದೇ ಗೋಳಾರ್ಧದಲ್ಲಿ ಇರುವುದರಿಂದ ವಾಕ್‌ಭ್ರಂಶದ ಸ್ಥಾನ ಕೂಡ ಕಾರ್ಟೆಕ್ಸ್‌ದಲ್ಲಿ ಒಂದೇ ಕಡೆ ಇರುತ್ತದೆ. ಇದು ಸಾಮಾನ್ಯವಾಗಿ ಎಡ ಗೋಳಾರ್ಧದಲ್ಲಿರುತ್ತದೆ. ಬಲ ಗೋಳಾರ್ಧಕ್ಕೆ ಪೆಟ್ಟು ತಗಲಿದಾಗ ಭಾಷೆ ಹಾಗೂ ಮಾತಿಗೆ ಸಂಬಂಧಿಸಿದ ಕಾರ್ಯಗಳ ಮೇಲೆ ಯಾವುದೇ ಪ್ರಭಾವ ಉಂಟಾಗುವುದಿಲ್ಲ.

ಮಾತಿಗೆ ಸಂಬಂಧಿಸಿದ ತೊಂದರೆಗಳಲ್ಲದೆ ಕೆಲ ಇತರ ಲಕ್ಷಣಗಳೂ ಈ ರೋಗಿಗಳಲ್ಲಿ ತೋರಿಬರುತ್ತವೆ. ರೋಗಿಯು ಶಾರೀರಿಕ ಸ್ಪಂದನಗಳನ್ನು ಪರಸ್ಪರ ಸಂಘಗೊಳಿಸಲು ಪೂರ್ತಿ ಶಕ್ತನಾಗುವುದಿಲ್ಲ. ಉದಾಹರಣೆಗಾಗಿ, ಬೀಗತೆಗೆಯಲು ಕಡ್ಡಿಗೀರಿ ಸಿಗರೇಟ್ ಹಚ್ಚಲು ಹೀಗೆಯೇ ಇನ್ನಿತರ ಕೆಲಸಮಾಡಲೂ ಅವನಿಗೆ ತೊಂದರೆಯಾಗುತ್ತದೆ. ಈ ರೀತಿಯ ತಡೆಯನ್ನು ಕ್ರಿಯಾರೋಧ [ ಎಪ್ರಾಕ್ಸಿಯಾ ] ಎನ್ನುತ್ತಾರೆ. ಇದರಲ್ಲಿ ಸಾಮಾನ್ಯವಾಗಿ ಕೈಯಿಂದ ಯಾವುದೇ ರೀತಿಯ ಕೆಲಸಮಾಡುವ ಶಕ್ತಿ ಕುಗ್ಗುತ್ತದೆ ಅಥವಾ ನಾಶವಾಗುತ್ತದೆ.

ಎರಡನೇ ವಿಧದ ತೊಂದರೆಯನ್ನು ಪ್ರಜ್ಞಾರೋಧ [ ಎಗ್ನಾಸಿಯಾ ] ಎನ್ನುತ್ತಾರೆ. ಇದರಲ್ಲಿ ಕೇಳಿದ ಇಲ್ಲವೇ ಕಂಡ ವಸ್ತುವಿನಲ್ಲಿ ಭ್ರಾಂತಿ, ಸರಿಯಾಗಿ ನೋಡದ ಅಥವಾ ಕೇಳಿಸದ ಸ್ಥಿತಿ ವಸ್ತುವಿನ ಗುರುತು ಸಿಗದಿರುವುದು ಆಕೃತಿ ಹಾಗೂ ಬಣ್ಣಗಳಲ್ಲಿ ಭೇದ ತಿಳಿದಿರುವುದು — ಮೊದಲಾದ ಲಕ್ಷಣಗಳು ತೋರಿಬರುತ್ತವೆ.

ಮೆದುಳಿನ ಕಾರ್ಟೆಕ್ಸ್‌ದ ಯಾವುದೇ ಭಾಗಕ್ಕೆ ಆಘಾತ ಉಂಟಾದರೂ ಈ ಭಾಗಗಳ ಸಂಯೋಜನ ಕೆಟ್ಟುಹೋಗುತ್ತದೆ. ಬುದ್ಧಿಪೂರ್ವಕ ವ್ಯವಹಿಸುವ ಶಕ್ತಿ ರೋಗಿಯಲ್ಲಿ ಎಷ್ಟರ ಮಟ್ಟಿಗೆ ಕುಗ್ಗುತ್ತದೆಂದು ಆಘಾತದ ತೀವ್ರತೆಯನ್ನವಲಂಬಿಸಿದೆ.

ರೋಗಿಯ ಪರಿಚರ್ಯೆ ಹಾಗೂ ಚಿಕಿತ್ಸೆ.

ಈ ಶಕ್ತಿಗಳು ಮೆಲ್ಲಮೆಲ್ಲನೆ ಕೆಲಕಾಲದ ಬಳಿಕ ತಾವಾಗಿಯೇ ಮರಳುವುದುಂಟು. ಅಥವಾ ವಾಕ್ ಚಿಕಿತ್ಸಕ ನೀಡುವ ವಿಶೇಷ ರೀತಿಯ ತರಬೇತಿಯಿಂದಲೂ ರೋಗಿ ಮಾತಾಡುವ ಹಾಗೂ ಅರ್ಥ ಮಾಡಿಕೊಳ್ಳುವ ಸಾಮರ್ಥ್ಯವನ್ನು ಮರಳಿ ಪಡೆಯಬಲ್ಲ. ಶಾರೀರಿಕ ಚಿಕಿತ್ಸೆ ನಡೆಯುವ ಡಾಕ್ಟರ್ ಇಲ್ಲಿ ವಿಫಲನಾಗುತ್ತಾನೆ. ಆದರೆ ರಕ್ತದೊತ್ತಡದ ಪರೀಕ್ಷೆ, ಮಧುಮೇಹ [ಡಯಾಬಿಟೀಸ್]ದ ತಡೆ, ಹೃದಯಸಂಬಂಧ ಹಾಗೂ ಇತರ ರೋಗಗಳ ಚಿಕಿತ್ಸೆ ಮೊದಲಾದ ಕೆಲಸಗಳಲ್ಲಿ ಆತ ಸಹಾಯ ಮಾಡಬಲ್ಲ.

ವಾಕ್ ಚಿಕಿತ್ಸಕ ಹಾಗೂ ಭಾಷಾಚಿತ್ರಕರು ಇಂಥರೋಗಿಯೊಡನೆ ತುಂಬ ಮಧುರವಾಗಿ ಮಾತಾಡುತ್ತಾರೆ. ರೋಗಿಯೊಡನೆ ಎಲ್ಲರೂ ಒಳ್ಳೇರೀತಿಯಿಂದ ವ್ಯವಹರಿಸುವಂತೆ ಅವರು ಪರಿವಾರದವರಿಗೆ ಸಲಹೆ ನೀಡುತ್ತಾರೆ. ಅವನ ಜೊತೆ ಸರಿಯಾಗಿ ಮಾತಾಡಬೇಕೆಂದೂ ಸೂಚಿಸುತ್ತಾರೆ. ಸ್ವಜನರ ಮೈತ್ರೀಪೂರ್ಣವ್ಯವಹಾರವೇ ರೋಗಿಯ ವಾಕ್ ಶಕ್ತಿಯನ್ನು ಮರಳಿಪಡೆಯಲು ಸಹಾಯಕವಾಗುತ್ತದೆ.

ರೋಗಿ ಉಳಿದೆಲ್ಲ ಕಾರ್ಯಗಳನ್ನು ಎಂದಿನಂತೆ ಮಾಡುತ್ತಿರಬೇಕು. ಅವನು ತಿರುಗಾಡುವಂತಿದ್ದರೆ ತಿರುಗಾಡಿ ಮಾಡುವ ಕೆಲಸಗಳನ್ನು ಸ್ವತಃ ಮಾಡಲಿ. ಈ ರೀತಿ ಅವನ ಸಾಮಾಜಿಕ ಜೀವನ ವಿಚ್ಛಿನ್ನವಾಗದೆ ಉಳಿದಂತಾಗುವುದು.

[ 26 ನೇ ಪುಟ ನೋಡಿ ]



# ಭವಿಷ್ಯದ ದೃಶ್ಯ ಕಂಡೆಯಾ ?

—ಕಯ್ಯಾರ ಕಿಞ್ಞಣ್ಣರೈ.

ತೆರೆ ಹಾರಿತಹ! ಭವಿಷ್ಯದ ದೃಶ್ಯ ಕಂಡೆಯಾ?
ಗಡಗಡನೆ ಪೊಡವಿ ನಡುಗಿತು, ಪ್ರಳಯ ಕಾಲವೆನೆ
ಕ್ರಾಂತಿ ಸ್ಫುಲಿಂಗದಿಂ ಉರಿಯು ಸೀಕರಿ ಹೋಯ್ತು
ಬುಡ ಕಿತ್ತು ಹಾರಿಹೋದವು ದುಷ್ಟ ಶಕ್ತಿಗಳು,
ಸುಟ್ಟುರಿಗೆ ಸಿಲುಕಿ ಘೂರ್ಣಿಸುವ ತರಗೆಲೆಯಂತೆ
ಉಲ್ಲೋಲ ಕಲ್ಲೋಲವಾಯ್ತು ವಿಪ್ಲವವಾರ್ಧಿ
ಆಲದಾಯೆಲೆ ಮೇಲೆ ಆಡುತಿಹೆಶಿಶುವಂತೆ
ಉಳಿದಿತೋ ಸಚ್ಛಕ್ತಿ, ಜನಮನದ ಶಿವಶಕ್ತಿ.

❀ ❀ ❀

ಮರಳಿ ಹೊಸಸೃಷ್ಟಿ! ಸರ್ವರು ಸಮಸಮಾನರೆನೆ
ಸರ್ವೋದಯವ ಸಾರುತಿಹ ವಿನೂತನ ಸೃಷ್ಟಿ
ಸರ್ವರಿಗಲಿ ಸಂತುಷ್ಟಿ ಕುರುಡಿಗಂಜನದೃಷ್ಟಿ

❀ ❀ ❀

ಅಲ್ಲಿ-ಭಯವಿಲ್ಲ, ದಯೆಯೇಯೆಲ್ಲಾ, ಶೋಷಣೆಯ
ಘರ್ಷಣೆಯ ಸುಳಿವಿಲ್ಲ; ಎಲ್ಲವುನಿರಾತಂಕ
ಎಲ್ಲೆಲ್ಲು ನಿಶ್ಶಂಕ, ಸಮಸುಖಿಗಳೆಲ್ಲರೂ
ಎಲ್ಲರುಪಕಾರಿಗಳು, ಎಲ್ಲರು ಉದಾರಿಗಳು
ಸಕಲರೂ ಸಹಕಾರ ನೀಡುವರು-ನೋಡುವರು
ತನ್ನಂತೆ ಪರರ, ಸಾಂತ್ವನದಿ ಮಾತಾಡುವರು
ಭ್ರಾತೃತ್ವಮಿತ್ರತ್ವದಿಂದ ಜತೆಗೂಡುವರು
ಸತ್ಯಕ್ಕೆ ಧರ್ಮಕ್ಕೆ ದೇಶಕ್ಕೆ ದುಡಿಯುವರು
ದುಡಿತದೊಳೆ ದೇವರನುಕಾಂಬ ಸತ್ಕರ್ಮಿಗಳು
ಹಿಡಿಮಣ್ಣು ಹುಡಿಯಿಂದ ಸ್ವರ್ಣಪರ್ವತಪಂಕ್ತಿ
ಕಡೆವಮರಶಿಲ್ಪಿಗಳು—ತ್ಯಾಗದೊಳೆ ಭೋಗಿಗಳು.

ದೇವ ಸಾಯುಜ್ಯಸನ್ನಿಧಿಯ ಪಡೆದ ಮಹಾತ್ಮ
ಕಣ್ಣಾರೆ ಕಾಣುತಿಹೆಸಲ್ಲವನು—ದಿವದಿಂದ
ಹರ್ಷಾಶ್ರುವರ್ಷ ಧಾರಾಕಾರ ಸುರಿಸುತಲಿ
ತಂಪಾಯಿತೈನೆಲವು, ನೆಲದ ಮಾನವ ಕುಲವು
ಚಿಗುರಿತು ಮನಶ್ಶಾಂತಿ! ಸಸ್ಯಶ್ಯಾಮಲೆಯಾಯ್ತು
ಧರಣಿ; ಸಜ್ಜನರು ಸಂತೃಪ್ತಿಯಲಿ ಬಾಳಿದರು.
ಮಳೆಬಂದು ಹೊಳೆತುಂಬಿ ಹರಿಯ ತೊಡಗಿತು, ಗಾಂಧಿ
ದಿವದೊಳಿದ್ದೇ ಇಳೆಯನಾಳಿದನು; ಬಾಳಿದನು.
ಚಂದ್ರಾರ್ಕತಾರಾಳಿ ಪ್ರಜ್ವಲಿಸುವನಿತು ಕಾಲ
ಸಾಹಸ್ರಸಾಹಸ್ರ ವರ್ಷ ತುಂಬುವ ಕಾಲ,
ಚಿರಕಾಲ, ಭದ್ರ ಶುಭ ಮಂಗಳ ಮೆರೆವಕಾಲ.

❀ ❀ ❀

ಕಸ್ತೂರಿ ಗಂಧವೆನೆ ಜಸದ ಪರಿಮಳ ಸುತ್ತು
ಪಸರಿಸಿತು ಷಟ್ಖಂಡಧರಣಿಮಂಡಳದಲ್ಲಿ
ಬುದ್ಧಮಹಮ್ಮದ ಕ್ರಿಸ್ತಜಿನದೇವ ಜರತುಷ್ಟ್ರ
ಸಾಕ್ರಟಿಸ್ ಪ್ಲೇಟೊ ಟಾಲ್‌ಸ್ಟಾಯ್ ಮುಂತಾದ
ಸಂತರೆಲ್ಲರು ಸೇರಿರುವ ದಿವ್ಯಸಭೆಯಲ್ಲಿ
ಅಧ್ಯಕ್ಷತೆಯ ಪೀಠ ಗಾಂಧಿಯೇರಿರೆ-ಘೋಷ
ಕೇಳಿಸಿತು-ಮರ್ತ್ಯದಿಂ ಮೊಳಗಿ ಮಾರ್ಮೊಳಗುತಲಿ:

"ರಘುಪತಿ ರಾಘವ ರಾಜಾರಾಮ್
ಪತಿತ ಪಾವನ ಸೀತಾರಾಮ್
ಈಶ್ವರ ಅಲ್ಲಾ ತೇರೇನಾಮ್
ಸಬ್‌ಕೋ ಸನ್ಮತಿ ದೇ ಭಗವಾನ್"

****

# ಮಣ್ಣಿನ ಮಕ್ಕಳ ಮೋಜಿನ ಸರಣಿ

ಸಂಗ್ರಹ: ಕೆ. ವಿರೂಪಾಕ್ಷಗೌಡ.

ಹಾಡಿದವರು: ಕೆಂಚಮ್ಮ ಮತ್ತು ಕೊಟ್ರಮ್ಮ

ಸನಮಧ್ಯಾಹ್ನ ಆದುವುಸ್ವಾಮಿ ಕಣ್ಣೀರು ಗಿಂಡ್ಯಾಗ ಉದಕವ ತಂದೀನಿ
ಚೆನ್ನಮಲ್ಲೇಶ ಏಳಾ! [ಬಿನ್ನಮೂಡ್ಯಾಳ ಗೌರವ್ವನಿಂತು||]
ಕೆಂಪು ಕಣಗಲಿ ಹೂವು ಚಂಪಟ್ಟು ಹೂ ಜಾಜಿ ಸಂಪಿಗಿ ವನದಾಗ
ಕಣಗಲಿ ತಂದೀನಿ ಹಂಪಿ ಲಿಂಗಯ್ಯ ಏಳಾ!
ನಾಗಾಳ ತಿನ್ನೋದು ನಾಲಿಗಿ ಸವಚೋದು|ಕ್ಯಾದಿಗಿ ಗೇಯಂಗ ಎಲುವುಂಜ
ಕೂಗಿದುವು ನಾಡೆಲ್ಲ ಬೆಳಗಾದುವು|
ಪಟ್ಟೆ ಶೀರಿನುಟ್ಟು ಮುತ್ತಿನ ಬಟ್ಟಟ್ಟು ಸೃಷ್ಟಿಗೀಶ್ವರನ ಜೊತೆಗೆ
ಕುಂತಿರುವ ಅಕ್ಕ ಗೌರವ್ವ ಏಳಾ [ಬಿನ್ನ ಮೂಡ್ಯಾಳ ಗಂಗೆವ್ವ ನಿಂತು]
ಸಾದಿನ ಸೀರಿ ಉಟ್ಟುನೀಲಾದ ಬಟ್ಟಟ್ಟು ರೂಢಿಗೀಶ್ವರನ ಜೊತೆಗೆ
ಕುಂತಿರುವ ತಂಗಿಗಂಗವ್ವ ಏಳಾ [ಬಿನ್ನಮೂಡ್ಯಾಳ ಗೌರವ್ವ ನಿಂತು]
"ತಂಗಿಗಂಗಾ" ನನಗ ಅಂದಾದ ಮಾತಲ್ಲ! ಚೆಂದಾದರು ನಿನ ಗಂಡನ
ಕರಕೊಂಡು ಹಿಂದಾತ ಸರಿಯೆಂದಳು
ಹೀನ ಕಬ್ಬುಲಿಗಿತ್ತಿ ಗಬ್ಬಿನ ಮಾತ್ಯಾಕ ವಿದ್ಯೆಯ ಶಿವನ ಬುದ್ಧಿವಾದವು
ಎದ್ದೋಗಿ ಬಡಿವಂತ ಬುದ್ಧಿ ನನಗಿಲ್ಲ!
ರಂಭೇರು ನೀವಿಬ್ಬರು ಒಂದಾಗಿ ಇದ್ದರೆ ಬಂಗಾರಕ ಮುತ್ತು ಹಚ್ಚಿ
ಕುಂದುರ್ಲೋಂದಿಸಿದ್ದಾಂಗ ಚೆಂದೆಲ್ಲ ಕೈಲಾಸ!
ಶಿವರಾಯ ರಂಭೇರಗ ಒಡನೆ ನುಡಿದಾನ

---

(13 ನೇ ಪುಟದಿಂದ) ..............(ಗುಹಾಲಯಗಳು.)

ಳನ್ನು ನಿರ್ಮಿಸಿದ ಭಿಕ್ಷುಗಳಂತೆ ಕೆಲ ಕಲಾಕಾರ ಕೀಟ ಕಾರ್ಮಿಕರು ಸುಂದರ ನಕ್ಷೆಗಳನ್ನು ಹೋಲುವ ಗುಹಾಲಯಗಳನ್ನು ಕೊರೆಯುವುದರಲ್ಲಿಯೂ ಹೆಸರುವಾಸಿಯಾಗಿವೆ. ಪರಿಶ್ರಮಪೂರ್ವಕ ಬೆಳೆಸಿಕೊಂಡ ಕಲಾತ್ಮಕ ಧಾರ್ಮಿಕ ಗುಹೆಗಳಿಗೂ ಈ ನೈಸರ್ಗಿಕ ಕಾರ್ಮಿಕರ ಆಲಯಗಳಿಗೂ ತುಂಬ ಸಾಮ್ಯವಿದೆ.

ಮರಿ ಕಾರ್ಮಿಕರು ಪಾಲಕರೊಂದಿಗೇ ವಾಸಿಸಿ ತಮ್ಮದೇ ಸಂಸಾರ ಹೂಡುವವು. ಒಂದು ಕೊರಡಿನ ಗವಿಯಲ್ಲಿ ಅತಿಹೆಚ್ಚು ಸದಸ್ಯರಾದಾಗ ಕೆಲವು ಬೇರೆಯೇ ಗುಹೆಯನ್ನು ಕೊರೆಯಲು ಪ್ರಾರಂಭಿಸುವವು. ಇದರಿಂದಾಗಿ ಕಾನೇರಿ ಗುಹಾಲಯಗಳಂತೆ ಕೀಟ-ಗುಹೆಗಳು ಅಕ್ಕಪಕ್ಕದಲ್ಲಿ ಪಸರಿಸಿಕೊಳ್ಳುವುವು ಕೆಲವೊಮ್ಮೆ ಇಡಿಮರವೊಂದು ಇಂತಹ 'ಮರಗುಹೆ'ಗಳಿಂದ ತುಂಬಿ ತುಳುಕುತ್ತಿರುತ್ತದೆ. ಇದರಿಂದಾಗಿ ಮರ ದುರ್ಬಲವಾಗುತ್ತ ಸಾವನ್ನು ಒಪ್ಪಿಕೊಂಡರೂ ಕೀಟಗಳು ತಮ್ಮವಾಸವನ್ನು ಮುಂದುವರೆಸುವವು. ಇಂತಹ ಮರಗಳ ಕಟ್ಟಿಗೆಯಿಂದ ತಯಾರಿಸಿದ ಟೇಬಲ್, ಕುರ್ಚಿ, ಕವಾಟಗಳಲ್ಲಿಯೂ ಈ ಕೀಟಗಳು ಇದ್ದು ತಮ್ಮ ಚಟುವಟಿಕೆಗಳನ್ನು ಮುಂದುವರಿಸುವವು. ಕಟ್ಟಿಗೆಯನ್ನೆಲ್ಲ ಪೊಳ್ಳು ಮಾಡಿಬಿಡುವವು. ಅಂತೆಯೇ ಇಮಾರತಿ ಕಟ್ಟಿಗೆಯನ್ನು ಒಣಗಿಸುವ ಪರಿಪಾಠ ನಮ್ಮಲ್ಲಿ ಬೆಳೆದು ಬಂದಿದೆ. ಬಿಸಿಲಿನ ಝಳಕ್ಕೆ ಕೀಟಗಳೆಲ್ಲ ಧ್ವಂಸವಾಗಿ ಹೋಗುವದರಿಂದ ಆನಂತರ ಅವುಗಳ ಪೀಡೆ ತಪ್ಪುವದು. ಪಾಶ್ಚಿಮಾತ್ಯ ದೇಶಗಳಲ್ಲಿ ಹಸಿ ಕಟ್ಟಿಗೆಯಲ್ಲಿ ರಸಾಯನಗಳನ್ನು ಸೇರಿಸಿ ಒತ್ತಡ ಮತ್ತು ಉಷ್ಣತೆಗೆ ಒಳಪಡಿಸುವುದರಿಂದ ಕೊರಡು ಕೀಟಗಳಿಂದ ಮುಕ್ತವಾಗಿ, ಕುಗ್ಗುವದು ಕಡಿಮೆಯಾಗಿ ಹೆಚ್ಚುಕಾಲ ಬಾಳಿಕೆ ಬರುವದು. ಇಷ್ಟೆಲ್ಲ ತೊಂದರೆ ಕೊಟ್ಟು ಪ್ರತಿ ವರ್ಷ ಮಾನವನಿಗೆ ಲಕ್ಷಗಟ್ಟಳೆ ರೂಪಾಯಿ ಖರ್ಚು ಮಾಡಲು ಹಚ್ಚುವ ಈ ಜೀವಿ ಕೇವಲ ಒಂದು ಮಿಲಿಮೀಟರಿನಷ್ಟು ಉದ್ದವಿದ್ದು ಅತಿ ಅನಾಕರ್ಷಕವಾಗಿರುವುದೆಂದರೆ ಎಷ್ಟು ಜನ ನಂಬಿಯಾರು? —

# ವಿಜ್ಞಾನ ಕುತೂಹಲ

— ಜಿ. ಗೋ. ರಮೇಶ್.

ಎಂದು ಹೊಸದನ್ನು ಕುರಿತು ಮನುಷ್ಯ ಆಲೋಚಿಸ ಹೊರಟನೋ ಅಂದೇ ವಿಜ್ಞಾನದ ಆರಂಭವೂ ಆಯಿತು. ಶತಮಾನಗಳ ಉದ್ದಕ್ಕೂ ವಿಜ್ಞಾನದಿಂದಾಗಿ ಹಲವು ಸೌಲಭ್ಯಗಳು ರೂಢಿಯಾಗಿರುವ ಜನರಿಗೆ ಅವುಗಳ ಪೂರೈಕೆಯಲ್ಲಿ ಏನೇ ವ್ಯತ್ಯಾಸವಾದರೂ ಜೀವನ ದುಸ್ತರವೆನಿಸುತ್ತದೆ. ವಿಜ್ಞಾನ ಉಪಕಾರಿ. ನೋವನ್ನು ನಿವಾರಿಸ ಬಲ್ಲುದು. ಅಂತೆಯೇ ಅದಕ್ಕೆ ಮೊರೆ ಹೋಗುವುದು ತಪ್ಪಿಲ್ಲ. ಇನ್ನೆರಡು ಗಂಟೆಗೆ ಸರಿಯಾಗಿ ಆಫೀಸಿನಲ್ಲಿ ಇರಬೇಕು. ಹೊರಡುವ ಸಿದ್ಧತೆಯಲ್ಲಿದ್ದ ಒಬ್ಬ; ಇದ್ದಕ್ಕಿದ್ದಂತೆ ದಮ್ಮು ಆರಂಭವಾಯಿತು. ಉಬ್ಬಸವ್ಯಾಧಿ ಪೀಡಿತನೆಂದಮೇಲೆ ಅದು ಸಾಮಾನ್ಯ. ಸಣ್ಣ ಮಾತ್ರೆಯೊಂದರಿಂದ ನೋವು ನಿವಾರಿಸಿ ಕೊಳ್ಳುವುದರಲ್ಲಿ ಅವನು ಮುಂದಾದ ಭಾರಿ ತಲೆನೋವು! ಎದುರಿಗಿರುವ ಏನೇ ವಸ್ತುವಾಗಲೀ ಚಚ್ಚಿ ಹಾಕಿಬಿಡೋಣ ಎನಿಸುವಷ್ಟು ಮೈಕೈನೋವು! ಅದಕ್ಕೂ ಗುಳಿಗೆಗಳು ಸಿದ್ಧವಾಗಿವೆ. ವಿಜ್ಞಾನ ಸಾಧಿಸದೆ ಇದ್ದದ್ದೇನು ? ಆದರೂ ಇನ್ನೂ ಹೊಸತನ್ನು ಹುಡುಕುವುದು ತಪ್ಪಿಲ್ಲ; ಮನುಷ್ಯ ನೋವು, ನರಳಾಟಗಳಿಗೆ ಪೂರ್ಣವಿರಾಮ ಹಾಕಿಲ್ಲ. ದಿನ ಬೆಳಗಾದರೆ ಅವನ ಕುತೂಹಲವೂ ಹೆಚ್ಚಾಗುವುದರಲ್ಲಿ ಆಶ್ಚರ್ಯವೇನಿಲ್ಲ!

## ಮೆದುಳಿಗೇ ಇಂಜಕ್ಷನ್

ಮೊದಲು ಮನಷ್ಯ ಬಯಸುವುದು ಆರೋಗ್ಯ. ಅದಿಲ್ಲದ ಯಾವುದೇ ಭಾಗ್ಯವೂ ಬೇಡವಾಗುತ್ತದೆ. ರೋಗಗಳಿಗೆ ಮದ್ದು, ಔಷಧಿ, ಮಾತ್ರೆ ಎಲ್ಲ ಇವೆ. ಶೀಘ್ರ ರೋಗದಿಂದ ಪಾರಾಗಲು ಚುಚ್ಚುಮದ್ದು (Injection) ಇದೆ. ಕೈತೋಳಿಗೋ ದೇಹದ ಇನ್ನಾವುದೇ ಭಾಗಕ್ಕೋ ಚುಚ್ಚುಮದ್ದು ಕೊಟ್ಟರೆ ಕ್ಷಣಕಾಲ 'ಹಾ' ಎನ್ನುವುದು ಸ್ವಾಭಾವಿಕ. ಇನ್ನು ಮೆದಳಿಗೇ ಇಂಜಕ್ಷನ್ ಎಂದರೆ ? ವಿಜ್ಞಾನ ಅದುಸಾಧ್ಯ ಎಂದಿದೆ. ಇದು ರಷ್ಯದಲ್ಲಿ ನಡೆದ ಒಂದು ಪ್ರಯೋಗ. ಮಾಸ್ಕೋನಗರದ ವಿಜ್ಞಾನಿ, ಸಂಶೋಧಕ ಒಸಿಲಿ ಜಕುಸೋವ್ ಅವರು ಸಾನ್‌ಫ್ರಾನ್ಸಿಸ್ಕೋದಲ್ಲಿ ಇತ್ತೀಚೆಗೆ ನಡೆದ ವಿಜ್ಞಾನ ಮೇಳವೊಂದರಲ್ಲಿ ಮಾತನಾಡುತ್ತಾ "ಕೆಲವು ರಾಸಾಯನಿಕಗಳನ್ನು ಮನುಷ್ಯನ ಮೆದುಳಿಗೆ ಇಂಜಕ್ಷನ್ ಮೂಲಕ ರವಾನಿಸಿದಾಗ ಅವನ ನಡವಳಿಕೆಗಳಲ್ಲಿ ಬದಲಾವಣೆಗಳು ಕಂಡು ಬಂದವು" ಎಂದು ಹೇಳಿದ್ದಾರೆ. ಈ ಸಂಶೋಧನೆಯ ಪೂರ್ಣ ವಿವರಗಳು ಪ್ರಕಟಗೊಂಡಾಗ ಅವುಗಳಿಂದ ಲಾಭವಿಲ್ಲದೆ ಇಲ್ಲ. ಮನುಷ್ಯನ ಮೆದುಳಿನೊಳಕ್ಕೆ ಖಚಿತವಾಗಿ ಬೇಕೆನಿಸಿದ ಕಡೆ ಔಷಧಿ ಕೊಡುವುದು ಹೇಗೆ ಎಂಬುದು ಒಂದು ಪ್ರಶ್ನೆಯಾಗಿ ಉಳಿದಿತ್ತು. ಆದರೆ ಈಗ ಆ ಪ್ರಶ್ನೆ ಇರುವುದಿಲ್ಲ. ಕೆಮೊಟ್ರಾಡ್ ಎನ್ನುವ ಉಪಕರಣ ಸಹಾಯಕ್ಕೆ ಬರುತ್ತದೆ. ರಾಕ್‌ಲೆಂಡ್ ಪರಿಶೋಧನಾ ಕೇಂದ್ರದವರೂ, ಏಲ್ ವಿಶ್ವವಿದ್ಯಾನಿಲಯದ ವಿಜ್ಞಾನಿಗಳೂ ಕೂಡಿ ಮೆದುಳಿನಲ್ಲಿ ಬೇಕಾದ ಕಡೆ ಔಷಧಿ ನೀಡಿದಾಗ ಇತರ ಅಂಗಗಳಿಗೆ ಕೆಟ್ಟ ಪರಿಣಾಮವೇನೂ ಸಂಭವಿಸದಂತೆ ಎಚ್ಚರವಹಿಸಬೇಕಾದ ಕ್ರಮಗಳ ಬಗೆಗೆ ಸಂಶೋಧನೆ ನಡೆಸುತ್ತಿರುವುದೂ ಒಂದು ಕುತೂಹಲದ ವಿಷಯ.

## ಎಲೆಕ್ಟ್ರಾನಿಕ್ ದಾದಿ

ಮುದ್ರಣ, ಟೆಲಿವಿಷನ್, ಗಣಕಯಂತ್ರಗಳು ಇವೆಲ್ಲ ಹಳೆಯ ಮಾತು. ಎಲೆಕ್ಟ್ರಾನಿಕ್ಸ್ ಅಪಾರ ಸಾಧಿಸಿದೆ. ಒಂದು ಅತಿಶಯವೆಂದರೆ ಬಹುಶಃ ಇನ್ನು ಮೇಲೆ ಆಸ್ಪತ್ರೆಗಳಲ್ಲಿ ನರ್ಸ್‌ಗಳ ಅಗತ್ಯವಿಲ್ಲದೆ ಹೋಗ ಬಹುದು. ಆ ಕೆಲಸವನ್ನು ಎಲೆಕ್ಟ್ರಾನಿಕ್ ದಾದಿ (Electronic Nurse) ಮಾಡುತ್ತದೆ. ವೈದ್ಯ ಆಸ್ಪತ್ರೆಯಲ್ಲಿ ತನ್ನ ಕೊಠಡಿಯಲ್ಲೇ ಕುಳಿತು ರೋಗಿ

ಗಳ ಉಸಿರಾಟ, ರಕ್ತದಒತ್ತಡ, ದೇಹದ ಉಷ್ಣತೆ, ನಾಡಿ ಬಡಿತ (pulse rate) ಇವುಗಳನ್ನು ತಿಳಿಯಬಹುದು. ಲಿಥುವೇನಿಯನ್ ಪ್ರದೇಶದ ಕೌನಾರದ ವಿಜ್ಞಾನಿಗಳ ಸಾಹಸದ ಫಲ ಈ ದಾದಿ. ತೀವ್ರ ನರಳುತ್ತಿರುವ ರೋಗಿಯ ಬಳಿ ಇರಿಸಲಾಗುವ ಈ ದಾದಿ ಅಂದರೆ ಹೊಸ ಎಲೆಕ್ಟ್ರಾನಿಕ್ ಉಪಕರಣ ರೋಗಿಯ ಸಮಸ್ತ ವಿವರಗಳನ್ನು ಗುರುತುಮಾಡಿಕೊಂಡು ಎರಡು ಸೆಕೆಂಡುಗಳಿಗೊಮ್ಮೆ ವೈದ್ಯನಿಗೆ ವರದಿ ಮಾಡುತ್ತದೆ. ವೈದ್ಯ ಯಾವ ಸಮಯದಲ್ಲಿ ರೋಗಿಗೆ ಚಿಕಿತ್ಸೆ ಅಗತ್ಯ ಎಂಬುದನ್ನು ಕುಳಿತಲ್ಲಿಂದಲೇ ತಿಳಿಯಬಹುದು. ವಿದೇಶಗಳಲ್ಲಿ ಈ ದಾದಿಯ ಮೇಲೆ ಹಲವಾರು ವೈದ್ಯರ ಕಣ್ಣು !

### ಯಂತ್ರಮಾನವ

ಜನಸಂಖ್ಯೆ ಹೆಚ್ಚಾಯಿತು. ಎಂಬ ಕೂಗಿನ ಜತೆಗೆ ಯಂತ್ರಮಾನವನ ಜನನ ಒಂದು ದೊಡ್ಡ ಸಮಸ್ಯೆಯೇ ಆಗುತ್ತದೇನೋ ? ತನ್ನಂತೆ ಅಥವಾ ಪ್ರಾಣಿಗಳಂತೆ ಕೆಲಸಮಾಡುವ ಯಂತ್ರಗಳನ್ನು ನಿರ್ಮಿಸುವ ಹಾದಿಯಲ್ಲಿ ವಿಜ್ಞಾನಿ ಈಗಾಗಲೇ ಬಹಳ ಮುಂದದ್ದಾನೆ. ಬಹುಮುಖ್ಯವಾದ ಸಂಗತಿಯೆಂದರೆ ನಮ್ಮಂತೆ ಯಂತ್ರಮಾನವನಿಗೆ ಬಳಲಿಕೆ! ನೋವು ಆಗುವುದಿಲ್ಲ.! ಹಡಗು ಹಾಗೂ ಕ್ಷಿಪಣಿಗಳು, ರೊಟ್ಟಿ ಉದ್ಯಮ [Bakery], ಉಳುಮೆಯಂತ್ರ, ದೂರ ನಿಯಂತ್ರಣ ಇವುಗಳಲ್ಲಿ ಯಂತ್ರಮಾನವರು ಕೆಲಸ ಮಾಡುತ್ತಾರೆ. ಈ ಯಂತ್ರಮಾನವರ ವೃದ್ಧಿಗೆಂದೇ ಪ್ರಯತ್ನಗಳು ನಡೆಯುತ್ತಿವೆ. ಈತ ರಸ್ತೆಗೆ ಬರಲು ಆರಂಭಿಸಿದನೆಂದರೆ ನಾವು ಅಜ್ಜ ಕಥೆಗಳಲ್ಲಿ ಬರುವ ರಾಜಕುಮಾರಿ ಯಾಂತ್ರಿಕರನ್ನು ನಂಬದೆ ವಿಧಿಯಿಲ್ಲ!

### ಮರೆವಿಗೆ ಚಿಕಿತ್ಸೆ

ಈದಿನ ಕಛೇರಿಯಲ್ಲಿ ಅವಸರದ ಮೀಟಿಂಗ್ ಇತ್ತಲ್ಲ ? ಅಯ್ಯೋ! ಮರೆತೇ ಹೋಯಿತು. ಮಿತ್ರನ ಮದುವೆಗೆ ಹೋಗಬೇಕಿತ್ತು. ಅದೂ ಮರೆತು ಬಿಟ್ಟೆ. ಸ್ವಲ್ಪ ನಿಲ್ಲಿ! ಇನ್ನುಮೇಲೆ ಹಾಗೆನ್ನಲಾಗದು. ಮರೆಯುವುದನ್ನು ತಪ್ಪಿಸಲು ಈಗ ಒಂದು ಮಾತ್ರೆ ಸಿಗುವುದಿದೆ. ಅದರ ಹೆಸರು ಕೋಸಾಲ್‌ಡನ್. ಜರ್ಮನಿಯ ರಾಸಾಯನಿಕ ತಜ್ಞರು ಈ ಮಾತ್ರೆಯನ್ನು ವಯಸ್ಕರ ಅಂಗಾಂಗಗಳ ನಿಷ್ಕ್ರಿಯತೆಗೆ ಹಾಗೂ ಪುಷ್ಟಿಯ ಕೊರತೆಗೆ ಉಪಯೋಗಿಸಿದಾಗ ಉತ್ತಮ ಫಲಿತಾಂಶ ಕಂಡುಬಂದಿತು. ಈ ಮಾತ್ರೆ ಇನ್ನು ಮೇಲೆ ಎಲ್ಲೆಡೆಯೂ ಸಿಗಬಹುದಾದರೆ ಅದರ ಸೇವನೆಯಿಂದ ನಮ್ಮ ಜ್ಞಾಪಕಶಕ್ತಿ ಹೆಚ್ಚೀತೇನೋ ?

### ಮುಟ್ಟದಿದ್ದರೂ ನೀರು ಸುರಿಯುವ ನಲ್ಲಿ

ಸುರಿಯುವ ನೀರನ್ನು ನಿಲ್ಲಿಸುವುದೂ, ನೀರು ಬೇಕಾದಾಗ ನಲ್ಲಿ ತಿರುಗಿಸುವುದೂ ಅಗತ್ಯವಿಲ್ಲ ಎನ್ನುವುದಾದರೆ ಸ್ವಲ್ಪ ಮೋಜೆನಿಸುತ್ತದೆ. ಒಂದು ಬಕೇಟನ್ನು ನಲ್ಲಿಯ ಕೆಳಗಿರಿಸಿದಾಗ ತನ್ನಂತೆ ತಾನೇ ನೀರು ಹೊರ ಹೊಮ್ಮುತ್ತದೆ. ಇವು ರಷ್ಯದ ವಿಜ್ಞಾನಿ ಎಂಜನಿಯರುಗಳಿಂದ ತಯಾರಿಸಲ್ಪಟ್ಟ ನಲ್ಲಿಗಳು. ಈ ನಲ್ಲಿಗಳು "ಫೋಟೋ ಎಲಿಮೆಂಟ್" ಗಳನ್ನು ಒಳಗೊಂಡಿರುತ್ತವೆ. ಯಾವುದೇ ಪಾತ್ರೆಯನ್ನಾಗಲೀ ಇಲ್ಲವೇ ಕೈಯನ್ನಾಗಲೀ ನಲ್ಲಿಯ ಕೆಳಗೆ ಹಿಡಿದಾಗ ಫೋಟೋ ಎಲಿಮೆಂಟ್‌ಗಳಿಂದ ಹೊರಸೂಸುವ ಕಿರಣಗಳಿಗೆ ತಡೆ ಉಂಟಾಗಿ ನೀರು ಹೊರ ಬರಲಾರಂಭಿಸುತ್ತದೆ. ಅಂದಮೇಲೆ ನಲ್ಲಿಯನ್ನು ಸ್ಪರ್ಶಿಸುವ ಅಗತ್ಯವಿರುವುದಿಲ್ಲ. ಇದರಿಂದ ಅಂಟುರೋಗಗಳು ಹರಡುವುದು ತಪ್ಪುತ್ತದೆ ಎನ್ನುವುದು ಗಮನಿಸಬೇಕಾದ ಅಂಶ.

ಮುಚ್ಚಿಟ್ಟವಸ್ತುವನ್ನು ನೋಡಲು ಮಗು ಕುತೂಹಲವನ್ನು ವ್ಯಕ್ತಪಡಿಸುತ್ತದೆ. ಜಗತ್ತಿನ ರಹಸ್ಯಗಳನ್ನು ತಿಳಿಯಲು ವಿಜ್ಞಾನಿ ತವಕಿಸುತ್ತಾನೆ. ಸೃಷ್ಟಿಯಲ್ಲಿ ಪ್ರತಿಸೃಷ್ಟಿಗೆ ಕಾರಣನಾಗುತ್ತಾನೆ ವಿಜ್ಞಾನಿ. ಸೃಷ್ಟಿಯ ಬಗ್ಗೆ ಹೇಗೆ ಕುತೂಹಲ ಉಂಟಾಗುವುದೋ ಪ್ರತಿಸೃಷ್ಟಿಯಬಗೆಗೂ ಹಾಗೆಯೇ. ಅದೇ ವಿಜ್ಞಾನ ಕುತೂಹಲ. ಈ ಪ್ರತಿಸೃಷ್ಟಿಯಲ್ಲಿ ಇನ್ನೂ ಉದ್ಭವಿಸುವುದೆಲ್ಲವನ್ನೂ ಕತುಹಲದಿಂದಲೇ ಕಾದು ನೋಡಬೇಕು !

—

# ಧಾರ್ಮಿಕ ಏಳಿಗೆ –ಮಹಿಳೆಯರ ಕೊಡುಗೆ

—ಪಿ. ಎಸ್. ಜಯಭಾರತಿ

ಧರ್ಮ ಸಮಾಜದಿಂದ ರೂಪಿತವಾಗಿದೆ. ಧರ್ಮದ ಆಧಾರ ನಂಬಿಕೆ. ನಂಬಿಕೆಯ ಬಂಧನದಲ್ಲಿ ಪ್ರತಿಯೊಬ್ಬ ಮನುಷ್ಯನನ್ನೂ ಕಟ್ಟಿ ಅವನಿಂದ ತನ್ನ ನಿಯಮಗಳ ಪಾಲನೆಯನ್ನು ಮಾಡಿಸುವುದರಲ್ಲಿಯೇ ಸಮಾಜದ ಹಿತವಿದೆ ಎನ್ನಬಹುದು.

ಪ್ರತಿಯೊಬ್ಬ ಮನುಷ್ಯನಿಗೂ ಒಂದು ಧರ್ಮದ ಅವಶ್ಯಕತೆ ಇರುತ್ತದೆ. ಒಂದು ನಿರ್ದಿಷ್ಟವಾದ ಗುರಿಯುಳ್ಳ ಹಾಗೂ ಶಾಂತರೀತಿಯ ಜೀವನ ನಡೆಸಲು ಧರ್ಮದ ಅಗತ್ಯವಿದೆ. ಅನೇಕ ಧರ್ಮಗಳಿರುವ ಈ ಜಗತ್ತಿನಲ್ಲಿ ಎಲ್ಲ ಧರ್ಮಗಳೂ ಸಾರುವ ಒಂದು ವಿಷಯವೆಂದರೆ ದೇವರ ಬಗ್ಗೆ ನಂಬಿಕೆ ಹಾಗೂ ಆ ನಂಬಿಕೆಯ ಮೇಲೆ ಮಾನವನ ಅವಲಂಬನೆ. ಪ್ರತಿಯೊಬ್ಬ ವ್ಯಕ್ತಿಯೂ ತನ್ನದೇ ಆದ ಕಲ್ಪನೆಯನ್ನು ದೇವರ ಬಗ್ಗೆ ವ್ಯಕ್ತಪಡಿಸುವ ಅವಕಾಶವಿದೆ. ಭಕ್ತಿಯು ಒಂದು ಧರ್ಮವಾಗಿ ಬೆಳೆದಿಲ್ಲ. ಆದರೂ ಅದು ಎಲ್ಲಾ ಧರ್ಮಗಳಲ್ಲೂ ಒಂದು ಪಂಥವಾಗಿ ಬೆಳೆದಿರುವುದನ್ನು ಕಾಣಬಹುದು. ನಂಬಿಕೆ ಮತ್ತು ಶರಣಾಗತಿ ಭಕ್ತಿಯಲ್ಲಿ ಸ್ಪಷ್ಟವಾಗಿ ಕಾಣುತ್ತವೆ.

India is a secular state. ಭಾರತದಲ್ಲಿ ಅನೇಕ ಧರ್ಮಗಳು ಇದ್ದರೂ ಒಟ್ಟಾಗಿ ನೋಡಿದಾಗ ಈ ಎಲ್ಲಾ ಧರ್ಮಗಳಲ್ಲೂ ಸಮಾನವಾದ ಅಂಶಗಳು ಸಾಕಷ್ಟಿವೆ. ದೇವರನ್ನು ಕುರಿತ ನಿರ್ಮಲವಾದ ಭಕ್ತಿ, ಮಾನವೀಯತೆಯ ಗುಣಗಳಾದ ಸತ್ಯ, ಅಹಿಂಸೆ, ಕ್ಷಮೆ, ಸಹಾನುಭೂತಿ, ಪ್ರೀತಿ ಇವೇ ಮುಂತಾದ ಸಾರ್ವಕಾಲಿಕ ಹಾಗೂ ಸರ್ವಜನಾಪೇಕ್ಷಿತ ಮೌಲ್ಯಗಳು ಎಲ್ಲ ಧರ್ಮಗಳಲ್ಲಿಯೂ ಹಾಸು ಹೊಕ್ಕಾಗಿವೆ. ಇಂದಿನ ಪರಿಸ್ಥಿತಿಯಲ್ಲಿ ಜೀವವರ್ಗವನ್ನೇ ಒಳಗೊಳ್ಳುವಂತ ಸಾರ್ವತ್ರಿಕವಾದ ವಿಶ್ವ ವಿಶಾಲವಾದ ಧರ್ಮದ ಅವಶ್ಯಕತೆ ಇದೆ. ಮಾನವನ ಒಳಿತಿಗೆ ಕಾರಣವಾದ ಮೂಲಭೂತವಾದ ಮೌಲ್ಯಗಳನ್ನು ಒಟ್ಟುಗೂಡಿಸಿ ಅವನ ಏಳಿಗೆಗಾಗಿ ವ್ಯಕ್ತಿ ತನ್ನತನವನ್ನು ಕಂಡುಕೊಳ್ಳುವುದಕ್ಕಾಗಿ ಶ್ರಮಿಸಬೇಕಾಗಿದೆ.

ಹಿಂದೆ ಹೇಳಿದಂತೆ ಸತ್ಯ, ಋಜುಮಾರ್ಗ, ಕ್ಷಮೆ ಅಹಿಂಸೆ, ಸಹಾನುಭೂತಿ ಮೊದಲಾದ ಭಾವನೆಗಳು ಪ್ರತಿಯೊಂದು ಧರ್ಮದಲ್ಲಿಯೂ ಇವೆ. ಪ್ರಮುಖ ವ್ಯಕ್ತಿಗಳು ಇದನ್ನರಿತು ಮತಾತೀತವಾದ ಜೀವನ ದೃಷ್ಟಿಯನ್ನು ತಮ್ಮ ಧರ್ಮಗಳಲ್ಲಿ ಕಂಡುಕೊಂಡಿದ್ದಾರೆ. ದಾಸ ಸಾಹಿತ್ಯದಲ್ಲಿ ಪುರಂದರದಾಸರ ಉದಾಹರಣೆಯನ್ನು ತೆಗೆದುಕೊಂಡರೆ ಅವರು ಕೇವಲ ಮಾಧ್ವ ಮತದ ಪ್ರಚಾರಕ್ಕೆ ಸೀಮಿತರಾಗದೆ ಒಟ್ಟು ಮಾನವ ಕೋಟಿಯ ಮೇಲ್ಮೆಗಾಗಿ ಶ್ರಮಿಸಿದರು. ಅವರ ಕೀರ್ತನೆಗಳಲ್ಲಿ ಕಾಣುವ ವಿಶಾಲ ಧಾರ್ಮಿಕ ದೃಷ್ಟಿಯಲ್ಲಿ ಅತ್ಯುಚ್ಚವಾದ ಪ್ರೀತಿ ತತ್ವ, ಅಹಿಂಸಾ ಧರ್ಮ, ಮಡಿ ಇವುಗಳ ಮಂಡನೆ ಇದ್ದು, ಜಾತಿ ಮತಗಳ ವೈರದ ಪರಿಹಾರ, ಪಂಚಮರಲ್ಲಿ ಸಹಾನು

ಭೂತಿ, ಅನೀತಿ, ಡಾಂಭಿಕತೆಗಳ ಕಟುವಿಮರ್ಶೆ, ಭಕ್ತಿ ಮಹಿಮೆಗಳ ವಿಶಾಲ ದೃಷ್ಟಿ ಇದೆ. ಈ ಅಂಶಗಳನ್ನು ಬಸವಣ್ಣನವರ ವಚನದಲ್ಲಿಯೂ ಕಾಣಬಹುದು.

'' ದಯವಿಲ್ಲದ ಧರ್ಮ ಆದೇವುದಯ್ಯಾ ?
ದಯಯೇ ಬೇಕು ಸಕಲ ಪ್ರಾಣಿಗಳಲ್ಲಿ ''
'' ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ
ತನ್ನ ಬಣ್ಣಿಸಬೇಡ ಇದಿರ ಹಳಿಯಲು ಬೇಡ
ಅನ್ಯರಿಗೆ ಅಸಹ್ಯ ಪಡಬೇಡ, ಇದೇ ಅಂತರಂಗ ಶುದ್ಧಿ
ಇದೇ ಬಹಿರಂಗ ಶುದ್ಧಿ

ಈ ಎಲ್ಲನೀತಿ ಮಾತುಗಳನ್ನರುಹಿದ ಎಲ್ಲ ಮಹಾನುಭಾವರೂ ಗತಕಾಲಕ್ಕೆ ಸೇರಿದವರಾಗಿದ್ದು ಅವರು ಬೋಧಿಸಿದ ಧರ್ಮವೂ ಅವರ ಹಿಂದೆಯೇ ಹೋಗಿರುವಂತೆ ಭಾಸವಾಗುತ್ತದೆ. ಇಂದಿನ ಪರಿಸ್ಥಿತಿಯನ್ನು ನೋಡಿದಾಗ ಜ್ಞಾನ ಮಾರ್ಗದಲ್ಲಿ ನಡೆದು ತಮ್ಮ ಗುರಿಯನ್ನು ಸಾಧಿಸುವ ಜನ ಇಂದು ಕೆಲವರೇ ಇದ್ದಾರೆ ಸನ್ಯಾಸಿಗಳೋ, ಪ್ರಕಾಂಡ ಪಂಡಿತರೋ, ಇದನ್ನು ಸಾಧಿಸಬಹುದು. ಆದರೆ ಸಾಮಾನ್ಯಜನರು ಇದನ್ನು ಸಾಧಿಸುವ ಬಗೆ ಹೇಗೆ? ಅಂದಿನ ಆ ಆದರ್ಶಗಳನ್ನೂ ಋಜುವಾದ ಕಾಲವನ್ನೂ, ವಾತಾವರಣವನ್ನೂ ಇಂದಿಗೆ ತರುವುದು ಹೇಗೆ ಎಂಬ ಪ್ರಶ್ನೆ ಉದ್ಭವಿಸುತ್ತದೆ.

ಸಮಾಜವು ವ್ಯಕ್ತಿಗಳ ಸಮುದಾಯವೇ ಆಗಿರುವುದರಿಂದ, ಇಡೀ ಒಂದು ಸಮಾಜದಲ್ಲಿ ಧಾರ್ಮಿಕ ಪ್ರವೃತ್ತಿ ನೆಲೆಗೊಳ್ಳಬೇಕಾದರೆ ವ್ಯಕ್ತಿಯಲ್ಲಿ ಅದು ಮೊದಲು ಹುಟ್ಟಬೇಕು. ಈ ಪ್ರವೃತ್ತಿಯನ್ನು ವ್ಯಕ್ತಿಯಲ್ಲಿ ಉಂಟುಮಾಡುವುದು ಹಾಗದರೆ ಯಾರ ಜವಾಬ್ದಾರಿ? ಎಂಬ ಪ್ರಶ್ನೆ ಏಳುವುದು ಸಹಜ.

ಕುಟುಂಬವು ಸಮಾಜದ ಒಂದು ಸಣ್ಣ ಆದರೂ ಅತ್ಯಂತ ಪ್ರಮುಖವಾದ ಘಟಕವಾಗಿದೆ. ಸಮಾಜದ ರಚನೆಯಲ್ಲಿ ಕುಟುಂಬ ಜೀವನಕ್ಕೆ ಅತ್ಯಂತ ಹಿರಿದಾದ ಸ್ಥಾನವಿದೆ. ಇಲ್ಲಿಯೇ ಪ್ರತಿಯೊಬ್ಬ ವ್ಯಕ್ತಿಯ ದೈಹಿಕ ಹಾಗೂ ಮಾನಸಿಕ ಬೆಳವಣಿಗೆಯಾಗುವುದು. "ಮಕ್ಕಳ ಸ್ಕೂಲ್ ಮನೆಯಲ್ಲಲ್ಲವೇ ? ಎಂಬ ಕೈಲಾಸಂರವರ ಹೇಳಿಕೆಯನ್ನು ನೆನೆಯಬಹುದು. ಮಕ್ಕಳ ದೈಹಿಕ ಹಾಗೂ ಮಾನಸಿಕ ಬೆಳವಣಿಗೆಗೆ ಮೂಲ ಪ್ರೇರಕ – ಪೋಷಕ ವ್ಯಕ್ತಿಯೆಂದರೆ ಸ್ತ್ರೀ. ಒಂದು ಕುಟುಂಬದಲ್ಲಿ ತಾಯಿಯಾಗಿ, ಮಗಳಾಗಿ, ಸೋದರಿಯಾಗಿ, ಗೃಹಲಕ್ಷ್ಮಿಯಾಗಿ, ಬರುವ ಈ ಸ್ತ್ರೀ ಧರ್ಮದ ಮೂಲತತ್ವಗಳನ್ನು ಬೆಳೆಸುವುದರಲ್ಲಿ ಹೆಚ್ಚು ಸಮರ್ಥಳಾಗಿದ್ದಾಳೆ. ತನ್ನ ಪತಿ ಹಾಗೂ ಮಕ್ಕಳ ಒಳ್ಳೆಯ ಜೀವನ ನಡೆಸಲಿ ಎನ್ನುವ ಆಶೆಯು ಆಕೆಗಿರುತ್ತದೆ. ಅವರ ಮೇಲೆ ತನ್ನ ಪ್ರೀತಿ ವಾತ್ಸಲ್ಯದ ಹೊಳೆಯನ್ನೇ ಹರಿಸುವ ಸ್ತ್ರೀ ಅವರ ಒಳಿತಿಗಾಗಿಯೂ ಶ್ರಮಿಸುತ್ತಾಳೆ. ಧಾರ್ಮಿಕ ಪ್ರವೃತ್ತಿ ಅವರಲ್ಲಿ ಉಂಟಾಗಲಿ ಎನ್ನುವ ಬಯಕೆ ಅವಳಲ್ಲಿರುವುದು ಸಹಜವೇ. ತೆರೆಮರೆಯಲ್ಲಿದ್ದು ತನ್ನವರಿಗಾಗಿ ಶ್ರಮಿಸುವ ಸ್ತ್ರೀಯಿಂದ ಜಗತ್ತಿನಲ್ಲಿ ಎಂತೆಂತಹ ಮಹಾ ಪುರುಷರು ರೂಪುಗೊಂಡಿದ್ದಾರೆ. ಎನ್ನುವುದನ್ನು ಚರಿತ್ರೆಯ ಪುಟಗಳನ್ನು ತಿರುವಿ ಹಾಕಿದಾಗ ತಿಳಿಯುತ್ತದೆ. ಚಕ್ರವರ್ತಿ ಶಿವಾಜಿ ಕೇವಲ ಅರಸನಾಗದೆ ಧರ್ಮಮಾರ್ಗದಲ್ಲಿ ನಡೆಯುವ ಮಹಾ ವ್ಯಕ್ತಿಯಾಗಿ ರೂಪುಗೊಂಡಿದ್ದು ತಾಯಿ ಜೀಜಾಬಾಯಿಯಿಂದಲೇ ಶ್ರೀ ಪುರಂದರದಾಸರು ಜಿಪುಣನಾದ ಸಾಮಾನ್ಯ ವ್ಯಕ್ತಿಯಿಂದ ಶ್ರೇಷ್ಠರಾದ ದಾಸವರೇಣ್ಯರಾಗಿದ್ದು ಪತ್ನಿಯ ಮುಖಾಂತರನಾಗಿಯೇ ಪುರಂದರದಾಸರ ಮಾತಿನಲ್ಲಿಯೇ ಹೇಳುವುದಾದರೆ "ದಂಡಿಗೆ ಬೆತ್ತ ಹಿಡಿಸಿದಳಯ್ಯ. ಹೆಂಡತಿ ಸಂತತಿ ಸಾವಿರವಾಗಲಿ'' ಎನ್ನುವಾಗ ಅವರ ಪತ್ನಿ ಅವರ ಜೀವನದಲ್ಲಿನ ಮುಖ್ಯ ತಿರುವಿಗೆ ಕಾರಣಳು ಎನ್ನುವುದು ವ್ಯಕ್ತವಾಗುತ್ತದೆ. ಮಹಾತ್ಮ ಗಾಂಧೀಜಿಯವರ ಆತ್ಮಕಥೆಯಲ್ಲಿ ಅವರ ತಾಯಿ ಮತ್ತು ಪತ್ನಿಯ ಪ್ರಭಾವವು ಅವರ ಮೇಲೆ ಆಗಿರುವುದೆಂಬುದನ್ನು ಕಾಣಬಹುದು.

ಚರಿತ್ರೆಯ ಪುಟಗಳಿಂದ ಮಹಿಳೆಯರ ಪಾತ್ರ ಎಂತಹುದಿದೆ ಎಂಬುದೇನೋ ಗೊತ್ತಾಯಿತು.

ಆದರೆ ಪ್ರಸ್ತುತ ಪರಿಸ್ಥಿತಿಯಲ್ಲಿಯೂ ಈ ಗುರುತರವಾದ ಕಾರ್ಯ ನಡೆಸ ಬಲ್ಲಳೆ? ಎಂಬ ಸಂಶಯ ಏಳುತ್ತದೆ. ಇಂದಿನ ರಾಜಕೀಯ ಹಾಗೂ ಸಮಾಜಿಕ ಆಂದೋಳನಗಳು ಪ್ರಕ್ಷುಬ್ಧ ವಾತಾವರಣದಲ್ಲಿ ಸ್ತ್ರೀ ಹಿಂದಿಗಿಂತಲೂ ಹೆಚ್ಚು ಶಕ್ತಿ ಶಾಲಿಯಾಗಿ, ಎಚ್ಚೆತ್ತಳಾಗಿ ಮುಂದೆ ಬರಬೇಕಾಗಿದೆ. ಈ ಕ್ಷೇತ್ರಗಳಲ್ಲಿ ಪುರುಷನಷ್ಟು ಅಧಿಕ ಸಂಖ್ಯೆಯಲ್ಲಿ ಭಾಗವಹಿಸದೇ ಹೋದರೂ, ಒಂದು ಕುಟುಂಬದಲ್ಲಿ ವ್ಯಕ್ತಿಯ ಮುನ್ನಡೆಗೆ ಕಾರಣಳಾಗಬೇಕು. "ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ" ಎಂಬ ಮನು ವಾಕ್ಯದಂತೆ, ಗೌರವ ಪೂಜೆಗಳಿಗೆ ಅರ್ಹಳಾದ ಸ್ತ್ರೀ ನಶಿಸಿ ಹೋಗುತ್ತಿರುವ ಧಾರ್ಮಿಕ ಭಾವನೆಗಳನ್ನು ಉಳಿಸಿ ಮಾನವ ಅವುಗಳನ್ನ ಅನುಷ್ಠಾನಕ್ಕೆ ತರುವಂತೆ ಮಾಡಬೇಕಾಗಿದೆ.

ಈ ಕಾರ್ಯವನ್ನು ನಡೆಸಬೇಕಾದ ಮಕ್ಕಳು ಎಲ್ಲ ರೀತಿಗಳಲ್ಲಿಯೂ ಆರೋಗ್ಯಕರವಾಗಿ ಬೆಳೆದು, ಸದ್‌ವ್ಯಕ್ತಿಗಳಾಗಬೇಕಾದರೆ ತಾಯಿಯ ಕರ್ತವ್ಯ ಹಿರಿದು. ಆದರೆ ಸಹಜವಾಗಿಯೇ ಈ ಬಯಕೆ ಹೊತ್ತು ಮಕ್ಕಳನ್ನು ಬೆಳೆಸುವ ಆ ತಾಯಿಗೆ ಈ ಕೆಲಸವೇನೋ ಕಷ್ಟವಾಗಲಾರದು.

"To educate a man is to educate a whole family" ಈ ಮಾತು ಆಂಗ್ಲ ಸಾಹಿತಿ ರಸ್ಕಿನ್‌ನಿಂದ ಹೇಳಲ್ಪಟ್ಟಿದೆ. ಇಂದು ಮಹಿಳೆಗೆ ಎಲ್ಲಾ ರೀತಿಯಲ್ಲೂ ವಿದ್ಯಾಭ್ಯಾಸ ದೊರಕುತ್ತಿರುವುದರಿಂದ ಹೊಸ ವಿಷಯಗಳನ್ನು ಕಲಿತು, ಸಹಜವಾಗಿಯೇ ತನ್ನಲ್ಲಿ ಬಂದಿರುವ ಉದಾತ್ತವಾದ ಮಾನವೀಯ ಮೌಲ್ಯಗಳನ್ನು ಕಲಿತು ಅದನ್ನು ತನ್ನ ಮಕ್ಕಳಿಗೆ ಧಾರೆ ಎರೆಯುವುದರಿಂದ ಅವಳ ಕರ್ತವ್ಯ ನಡೆದಂತಾಗುತ್ತದೆ.

ಪಾಶ್ಚಾತ್ಯರ ಅಂಧಾನುಕರಣೆ, ಧರ್ಮದ ಬಗ್ಗೆ ಅಜ್ಞಾನ, ತಪ್ಪು ತಿಳುವಳಿಕೆ, ಇವುಗಳಿಂದ ದಿನದಿಂದ ದಿನಕ್ಕೆ ಅಧೋಗತಿಗೆ ಇಳಿಯುತ್ತಿರುವ ಇಂದಿನ ಯುವಜನಾಂಗಕ್ಕೆ ಸೂಕ್ತ ಮಾರ್ಗದರ್ಶನ ಮಾಡಬೇಕಾಗಿದೆ. ಇಂತಹ ಒಂದು ಸ್ಥಿತಿಯಲ್ಲಿ ತಾಯಂದಿರು ಹಿಂದಿನ ಪೀಳಿಗೆಯವರಂತೆ ರಾಮಾಯಣ, ಮಹಾಭಾರತ ಕಥೆಗಳು, ಅದರಲ್ಲಿ ಕಂಡು ಬರುವ ಮಹಾವ್ಯಕ್ತಿಗಳ ಆದರ್ಶಗಳು ಇವುಗಳನ್ನು ಒತ್ತಿಹೇಳಿ ಅವರ ಚಾರಿತ್ರ್ಯವನ್ನು ರೂಪಿಸಿ ಇಂದಿನ ಪೀಳಿಗೆಯ ಅಶಿಸ್ತು ಅಶಾಂತಿಯನ್ನು ಕಡಿಮೆ ಮಾಡಿ ದೇವರಲ್ಲಿ ಭಕ್ತಿ ಗುರುಹಿರಿಯರಲ್ಲಿ ಮರ್ಯಾದೆ ಇವುಗಳನ್ನು ಬೆಳಸಿಕೊಳ್ಳಲು ಸಹಾಯ ಮಾಡಬಹುದು.

ನಾಲ್ಕು ಗೋಡೆಗಳ ಮಧ್ಯೆ ಕಲಿತ ಜ್ಞಾನವಲ್ಲದೆ ಹೊರಗಿನ ಸಾಮಾಜಿಕ ರಂಗಗಳಲ್ಲಿ ಕೆಲಸ ಮಾಡಿ ಸಂಪಾದಿಸಿದ ಹೊಸ ಅನುಭವದ ತಿಳುವಳಿಕೆಯಿಂದಲೂ ಸಮರ್ಥವಾದ ರೀತಿಯಲ್ಲಿ ತನ್ನ ಜವಾಬ್ದಾರಿಯನ್ನು ನಿರ್ವಹಿಸಬಲ್ಲವಳಾಗಿದ್ದಾಳೆ. ಹಿಂದೆ ಹೇಳಿದಂತೆ ಉತ್ತಮವಾದ ಮಾನವ ಧರ್ಮದ ಭಾವನೆಗಳಾದ ಕ್ಷಮೆ, ಪ್ರೀತಿ, ಸಹಾನುಭೂತಿ ವಾತ್ಸಲ್ಯಗಳನ್ನು ನೈಸರ್ಗಿಕವಾಗಿಯೇ ಸ್ತ್ರೀ ಪಡೆದಿರುವುದರಿಂದ ನಿಸ್ವಾರ್ಥವಾಗಿ ಅದನ್ನು ತನ್ನ ಮಕ್ಕಳಲ್ಲಿ ಹರಿಸುತ್ತಾಳೆ. ತನ್ಮೂಲಕ ಉತ್ತಮ ಜನಾಂಗದ ನಿರ್ಮಾಣ ಮಾಡುತ್ತಾಳೆ. ಹುಟ್ಟಿದಾಗಿನಿಂದ ತಾಯಿಯೊಟ್ಟಿಗಿರುವ ಮಗುವಿನ ಸಂಪೂರ್ಣವಾದ ಜವಾಬ್ದಾರಿಯನ್ನು ಅವಳು ಹೊರುತ್ತಾಳೆ. ತನ್ನ ಸುತ್ತ ಮುತ್ತಲೂ ಕಾಣ ಸಿಗುವ ವಸ್ತುಗಳನ್ನು ಪರಿಚಯ ಮಾಡಿಕೊಟ್ಟು ಯಾವುದರಿಂದ ಒಳಿತಾಗುತ್ತದೆ ಯಾವುದರಿಂದ ಕೆಟ್ಟದಾಗುತ್ತದೆ ಎಂಬ ಅರಿವನ್ನೂ, ತಾರತಮ್ಯ ಜ್ಞಾನವನ್ನೂ ಮಾಡಿಕೊಡುತ್ತಾಳೆ. ಬೆಂಕಿ ಉರಿಯುವಾಗ ನೋಡಲಿಕ್ಕೆ ಸುಂದರವಾಗಿ ಕಂಡರೂ ಮುಟ್ಟಿದರೆ ಸುಡುತ್ತದೆ ಎಂಬ ತಿಳುವಳಿಕೆಯನ್ನು ಕೊಡುವವಳು ತಾಯಿಯೇ "ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗಿತೆ?" ಎಳೆಯ ವಯಸ್ಸಿನಲ್ಲೇ ಮಾನವೀಯ ಭಾವನೆಗಳನ್ನು ಮೃದು ಮನಸ್ಸಿನ ಮೇಲೆ ಹರಿಸಿ, ಧಾರ್ಮಿಕ ಮಾರ್ಗದೆಡೆಗೆ ಬಗ್ಗಿಸಬೇಕು. ಹಾಗೆ ಬೆಳೆದಂತಹ ಮಗು ಮುಂದೆ ನಿಜವಾದ ಅರ್ಥದಲ್ಲಿ ಮನುಷ್ಯರಾಗುವುದರಲ್ಲಿ ಯಾವ ಸಂಶಯವೂ ಇಲ್ಲ.

ಸಮಾಜದಲ್ಲಿ ಕಂಡುಬರುವ ಅಧಾರ್ಮಿಕ

(24 ನೇ ಪುಟ ನೋಡಿ)

[ ಮುಂದುವರಿದ ಲೇಖನ ]

# ನಮ್ಮ ರೈತ ಅಂದು-ಇಂದು

—ಡಿ. ವೆಂಕಟರಾವ್.

ಇಲ್ಲಿಯವರೆಗೆ..................

ಕೃಷಿ ಅಭಿವೃದ್ಧಿಗೆ ನೆರವಾಗುವ ಸಲಕರಣೆಗಳ ಕೊರತೆ ಹಾಗೂ ಇತರ ನೂರಾರು ಸಮಸ್ಯೆಗಳು ರೈತರನ್ನು ಹೀನಸ್ಥಿತಿಗಿಳಿಸಿದ್ದಿತು. ದೇಶದ ಅಭಿವೃದ್ಧಿಯು ಕೃಷಿ ಅಭಿವೃದ್ಧಿಯನ್ನು ಅವಲಂಬಿಸಿರುವುದರಿಂದ ಇತ್ತೀಚೆಗೆ ಸರ್ಕಾರದ ಗಮನ ಇತ್ತ ಹರಿದಿರುವುದು ಗಮನಾರ್ಹ ಹಾಗೂ ಪ್ರಗತಿಯತ್ತ ಹೆಜ್ಜೆಹಾಕಲು ಸಾಧ್ಯವಾಗುತ್ತಿದೆ.

..................ಇನ್ನು ಮುಂದೆ ಓದಿ

ಅಧಿಕ ವ್ಯವಸಾಯೋತ್ಪಾದನೆಯಲ್ಲಿ ಮತ್ತು ಅಧಿಕ ವರಮಾನದಿಂದ ಜೀವನ ಮಟ್ಟದ ಹೆಚ್ಚಳವನ್ನುಂಟುಮಾಡುವಲ್ಲಿ ಸಾಲವೊಂದು ಮಹತ್ವದ ಅಂಶವಾಗಿದೆ. ಈ ದಿಸೆಯಲ್ಲಿ ಸ್ವಾತಂತ್ರ್ಯ ನಂತರ ಪಂಚವಾರ್ಷಿಕ ಯೋಜನೆಗಳಲ್ಲಿ ಹೆಚ್ಚಿನ ಗಮನವನ್ನು ನೀಡಲಾಗಿದೆ. ಸ್ವಾತಂತ್ರ್ಯಕ್ಕೆ ಮೊದಲಿದ್ದಂತೆ, ಇಂದು ರೈತರು ಸಾಹುಕಾರರ ಶೋಷಣೆಯಲ್ಲಿ ನರಳಬೇಕಾಗಿಲ್ಲ. ಇಂದು ಕೃಷಿ ವ್ಯವಸ್ಥೆಯಲ್ಲಿ ಸಾಲ ಕೊಡುವ ಸಹಕಾರ ಸಂಸ್ಥೆಗಳು ರೂಪಗೊಂಡು ರೈತರ ಸಮಸ್ಯೆಗಳನ್ನು ಬಹುಮಟ್ಟಿಗೆ ದೂರ ಮಾಡುತ್ತಿವೆ. ರೈತರಿಗೆ ಉತ್ತಮ ಬೀಜಗಳನ್ನು, ಗೊಬ್ಬರಗಳನ್ನು ಕೊಂಡುಕೊಳ್ಳಲು ಸಾಲವನ್ನು ಕಡಿಮೆ ದರದ ಬಡ್ಡಿಗೆ ಸಕಾಲದಲ್ಲಿ ಒದಗಿಸುವುದರೊಂದಿಗೆ ರೈತರ ಕಡೆಗೆ ಹೆಚ್ಚಿನ ಗಮನ ಹರಿಸಿವೆ. ಹಳ್ಳಿಯ ರೈತರನ್ನು ಸಾಹುಕಾರರ ಕಪಿಮುಷ್ಟಿಯಿಂದ ಬಿಡಿಸಿ ಅವರ ಹಣಕಾಸಿನ ಪರಿಸ್ಥಿತಿಯನ್ನು ಸುಧಾರಿಸುವುದೇ ಈ ಸಂಸ್ಥೆಗಳ ಮುಖ್ಯ ಉದ್ದೇಶವಾಗಿದೆ. ಇಂದು ರೈತರು ಹಳ್ಳಿಯಲ್ಲಿರುವ ಪ್ರಾಥಮಿಕ ಸಹಕಾರ ಸಂಸ್ಥೆಗಳು ಅಥವಾ ಸೇವಾ ಸಹಕಾರ ಸಂಸ್ಥೆಗಳಿಂದ ಅಲ್ಪಾವಧಿಯ ಸಾಲವನ್ನು ಪಡೆಯಬಹುದು. ಗೇಣಿದಾರರಿಗೂ ಈ ಸೌಲಭ್ಯವುಂಟು. ರಾಜ್ಯ ಮಟ್ಟದಲ್ಲಿ ಅಪೆಕ್ಸ್ ಬ್ಯಾಂಕು, ಜಿಲ್ಲಾ ಮಟ್ಟದಲ್ಲಿ ಕೇಂದ್ರ ಸಹಕಾರಿ ಬ್ಯಾಂಕು ಹಾಗೂ ಗ್ರಾಮಾಂತರ ಮಟ್ಟದಲ್ಲಿ ಪ್ರಾಥಮಿಕ ಸಹಕಾರ ಸಂಸ್ಥೆಗಳು ಹೀಗೆ ಮೂರು ಭಾಗಗಳಿದ್ದು ಇವು ರೈತರಿಗೆ ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲಗಳನ್ನು ಒದಗಿಸುತ್ತವೆ.

ಇಂದಿನ ರೈತರು ಹಿಂದೆ ನಮ್ಮ ತಾತ-ಮುತ್ತಾತಂದಿರು ಅನುಸರಿಸುತ್ತಿದ್ದ ಕೃಷಿಯ ರೀತಿಯನ್ನೇ ಇಂದೂ ಅನುಸರಿಸಿದರೆ ಅವರ ಜೀವನ ನಡೆಯುವುದು ದುಸ್ಸಾಧ್ಯ. ಇಂದಿನ ರೈತರು ತಮ್ಮ ಬದುಕಿನಲ್ಲಿ ಸುಖ-ಸಂತೋಷ-ನೆಮ್ಮದಿಗಳನ್ನು ಕಾಣಬೇಕಾದರೆ ಹೆಚ್ಚು ಬೆಳೆಯನ್ನು ಉತ್ಪತ್ತಿ ಮಾಡಬೇಕಾಗುತ್ತದೆ. ಇದಕ್ಕಾಗಿ ಆಧುನಿಕ ಪದ್ಧತಿಯನ್ನು ಕೈಗೊಂಡು, ವೈಜ್ಞಾನಿಕ ನೆರವನ್ನು ಪಡೆಯಬೇಕಾಗುತ್ತದೆ. ಭೂಮಿಯನ್ನು ಶಾಶ್ವತವಾಗಿ ಉತ್ತಮಪಡಿಸಲು ನೀರಾವರಿ, ಭಾವಿಯನ್ನು ತೋಡಿಸಲು, ಕಾಲುವೆಗಳನ್ನು ನಿರ್ಮಿಸಲು, ತೋಟ ಗದ್ದೆಗಳ ಸುತ್ತಲೂ ಬೇಲಿಗಳನ್ನು ಕಟ್ಟಲು ಟ್ರಾಕ್ಟರ್, ಕೊಯ್ಲು ಯಂತ್ರ ಮುಂತಾದ ನವೀನ ಯಂತ್ರೋಪಕರಣಗಳನ್ನು ಕೊಳ್ಳಲು ರೈತರಿಗೆ ಹೆಚ್ಚಿನ ಹಣ ಬೇಕು. ಇದಕ್ಕಾಗಿ ತಾಲ್ಲೂಕು ಮಟ್ಟದಲ್ಲಿ ಭೂ ಅಭಿವೃದ್ಧಿ ಬ್ಯಾಂಕುಗಳು ಹಾಗೂ ರಾಜ್ಯ ಮಟ್ಟದಲ್ಲಿ ಕೇಂದ್ರ ಭೂ ಅಭಿವೃದ್ಧಿ ಬ್ಯಾಂಕುಗಳು ದೀರ್ಘಾವಧಿ ಸಾಲವನ್ನು ರೈತರಿಗೆ ನೀಡುತ್ತವೆ. ಈಗ ಭಾರತದಲ್ಲಿ ಸುಮಾರು 1350 ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳು ಕಾರ್ಯರೂಪದಲ್ಲಿವೆ. ಇತ್ತೀಚೆಗೆ ಈ ಬ್ಯಾಂಕುಗಳ ಕಾರ್ಯಕ್ಷೇತ್ರ ವಿಸ್ತರಿಸಿದ್ದು ಸಾಲ ನೀಡಿಕೆಯ ಮೊತ್ತವೂ ಏರಿದೆ. ಕಾಫಿ, ಟೀ, ಅಡಕೆ

ಮುಂತಾದ ತೋಟಗಾರಿಕೆ ಕೃಷಿಯನ್ನು ಅಭಿವೃದ್ಧಿಗೊಳಿಸಲು ಈ ಬ್ಯಾಂಕುಗಳು ರೈತರನ್ನು ಪ್ರೋತ್ಸಾಹಿಸುತ್ತವೆ. ಈ ಬ್ಯಾಂಕುಗಳಿಂದ ಇಲ್ಲಿಯವರೆಗೆ ಸುಮಾರು 40 ಲಕ್ಷ ರೈತ ಕುಟುಂಬಗಳಿಗೆ ಸಾಲವನ್ನು ನೀಡಲಾಗಿದೆಯೆಂದು ತಿಳಿದುಬಂದಿದೆ. ಮೊದಲಿಗೆ ಈ ಬಗೆಯ ಸಾಲಗಳನ್ನು ಪಡೆಯಲು ರೈತರು ಬಹಳಕಷ್ಟ ಪಡಬೇಕಾಗಿತ್ತು. ಆದರೆ ಇತ್ತೀಚೆಗೆ ಎಲ್ಲಾ ನಿಯಮಗಳನ್ನೂ ಸಡಿಲಗೊಳಿಸಿರುವುದರಿಂದ ರೈತರು ಬಹಳ ಸುಲಭವಾಗಿ ಸಾಲವನ್ನು ಪಡೆಯಬಹುದಾಗಿದೆ. ಸಹಕಾರ ಸಂಸ್ಥೆಗಳು ರೈತರಿಗೆ ಹಣದ ರೂಪದಲ್ಲಿ ಸಾಲಕೊಡುವುದರ ಜೊತೆಗೆ ವಸ್ತುರೂಪದಲ್ಲೂ ಕೃಷಿಸಾಧನಗಳನ್ನೂ ಪೂರೈಸುತ್ತವೆ. ಗ್ರಾಮಾಂತರ ಪ್ರದೇಶದಲ್ಲಿರುವ ಕೆರೆ ಭಾವಿ ಮುಂತಾದ ನೀರಾವರಿ ಸೌಕರ್ಯವನ್ನು ಹೆಚ್ಚಿಸಲು ಪ್ರಯತ್ನಿಸುತ್ತಿವೆ. ಹೀಗೆ ಸಹಕಾರಿ ಸಂಸ್ಥೆಗಳು ಇಂದು ರೈತರ ಒದುಕಿನಲ್ಲಿ ಒಂದು ಹೆಮ್ಮೆಯ ಸಾಧನವಾಗಿದೆ. ರೈತರಲ್ಲಿ ನಿಜವಾದ ಅರಿವುಮಾಡಿ ತಾವು ಬಾಳಿ ಬೆಳೆಯುವ ವಿಷಯದ ಬಗ್ಗೆ ಅವರಲ್ಲಿ ಆಸಕ್ತಿ ಕುದುರಿಸಲು ಈ ಸಂಸ್ಥೆಗಳ ನಿರಂತರ ಶ್ರಮ ಅಗತ್ಯ ಹಾಗೂ ಅನಿವಾರ್ಯವೂ ಆಗಿದೆ. ಸಹಕಾರಿ ಸಂಸ್ಥೆಗಳ ಜೊತೆಗೆ ವಾಣಜ್ಯ ಬ್ಯಾಂಕುಗಳು ಇಂದು ರೈತರಿಗೆ ಸಾಲ ನೀಡುತ್ತವೆ, ಪ್ರಾರಂಭದಲ್ಲಿ ಈ ಬ್ಯಾಂಕುಗಳು ಹೆಚ್ಚಾಗಿ ವಾಣಿಜ್ಯೋದ್ಯಮಗಳಿಗೆ ಮಾತ್ರ ಸಾಲನೀಡಿ ಹೆಚ್ಚು ಲಾಭ ಪಡೆಯುತ್ತಿದ್ದವು. ಇದ ನಿವಾರಿಸಲು 1969ರಲ್ಲಿ ಹದಿನಾಲ್ಕು ಪ್ರಮುಖ ಬ್ಯಾಂಕುಗಳನ್ನು ರಾಷ್ಟ್ರೀಕರಣ ಮಾಡಲಾಯಿತು. ಇದರಿಂದಾಗಿ ರೈತರಿಗೆ ಹೆಚ್ಚಿನಮಟ್ಟದ ಸಾಲದೊರೆಯುವಂತಾಯಿತು. ಈ ಬ್ಯಾಂಕುಗಳಿಂದ ರೈತರಿಗೆ ದೊರೆಯುವ ಸಾಲವು ಅತ್ಯುತ್ತಮವೆಂದು ತಿಳಿದುಬಂದಿದೆ. ಇದಲ್ಲದೆ ಸರಕಾರವು ರೈತರಿಗೆ ಕೃಷಿ ಕಾರ್ಯಗಳನ್ನು ಕೈಗೊಳ್ಳಲು ಸಾಲವನ್ನು ನೀಡುತ್ತದೆ.

[ ಮುಂದುವರೆಯುವುದು ]

---

## ಧಾರ್ಮಿಕ ಏಳಿಗೆ—ಮಹಿಳೆಯರ ಕೊಡುಗೆ

[22ನೇ ಪುಟದಿಂದ]

ಪ್ರವೃತ್ತಿಗಳನ್ನು ಹೋಗಲಾಡಿಸಬೇಕಾದರೆ ಸ್ತ್ರೀ ಮೊದಲು ತನ್ನ ಮನೆಯಲ್ಲಿರುವ ಸಣ್ಣತನವನ್ನು ನಾಶಮಾಡಬೇಕು. ಅಲ್ಲಿಂದ ಪ್ರಾರಂಭವಾದ ಈ ಶುಚಿಮಾಡುವ ಕೆಲಸ ಮುಂದೆ ಸಮಾಜಕ್ಕೆ ಹಬ್ಬಬೇಕು. ಮನೆಯಲ್ಲಿ ಒಳ್ಳೆಯ ವಾತಾವರಣ ಉಂಟುಮಾಡಿ ಸದಾ ಮಕ್ಕಳ ಮೇಲೆ ಒಳ್ಳೆಯ ಪರಿಣಾಮ ಬೀರುತ್ತಿರುವಂತೆ ಮಾಡಬೇಕು.

ಇಂದು ಮಹಿಳೆ ಕುಟುಂಬದಿಂದ ಹಿಡಿದು ರಾಜಕೀಯ, ಸಾಮಾಜಿಕ ಕ್ಷೇತ್ರಗಳಲ್ಲಿಯೂ ಅಧಿಕ ಸಂಖ್ಯೆಯಲ್ಲಿ ಒಂದು ಧರ್ಮ ಮಾರ್ಗ ನೆಲೆಗೊಳ್ಳುವಂತೆ ಮಾಡಲು ವೈಯಕ್ತಿಕ ಆಸೆ, ಸ್ವಾರ್ಥಗಳನ್ನು ಬಿಟ್ಟು ಇಡೀ ಸಮಾಜದ ಮಾನವ ಜನಾಂಗದ ಉದ್ಧಾರ ಕಾರ್ಯ ಕೈಗೊಳ್ಳಬೇಕು. ಉತ್ತಮ ಮುಂಖಡನನ್ನು ತಯಾರು ಮಾಡುವುದರ ಜೊತೆಗೆ ಇರುವವರನ್ನು ತಿದ್ದಬೇಕು.

ರಚನಾತ್ಮಕವಾಗಿ ಎಂದಾಗ ಮತ್ತೊಂದು ನೆನಪಿಗೆ ಬರುವ ಮುಖ್ಯಾಂಶವೆಂದರೆ ಸಾಹಿತ್ಯ. ಉತ್ತಮವಾದ ಧಾರ್ಮಿಕವಾದ ಮಾನವೀಯ ಮೌಲ್ಯಗಳಿಂದ ಕೂಡಿದ ಸಾಹಿತ್ಯ ಸೃಷ್ಟಿಯಿಂದ ತನ್ನ ಕೆಲಸವನ್ನು ನೆರವೇರಿಸಬಹುದಾಗಿದೆ. ನಮ್ಮ ಹಿಂದಿನ ಕವಿಗಳು ಪ್ರಪಾದಿಸಿರುವ ತತ್ವಗಳು ಕೂಡ ಹೀಗೆಯೇ ಸಾಹಿತ್ಯದ ಮೂಲಕವಾಗಿಯೇ ಮೂಡಿ ಬಂದಿವೆ. ಆ ಒಂದು ಕಾಲದ ಜನಾಂಗದ ಉದ್ಧಾರ ಮಾತ್ರವಲ್ಲದೆ ಮುಂದೆ ಬರುವ ಜನಾಂಗದ ಏಳಿಗೆಯೂ ಸಾಧ್ಯವಾಗುವಂತಹ ಶ್ರೇಷ್ಠ ಮಟ್ಟದ ಸಾಹಿತ್ಯ ರಚನೆ ಸ್ತ್ರೀಯರಿಂದ ನಡೆಯಬೇಕು. ದಾಸ ಪರಂಪರೆಯಲ್ಲಿ ಬರುವ ಹೇಳವನಕಟ್ಟೆ ಗಿರಿಯಮ್ಮ ತಾನು ನಂಬಿದ ಧರ್ಮವನ್ನು ಕೀರ್ತನೆಗಳ ಮೂಲಕ ಅಭಿವ್ಯಕ್ತಿಸಿದ್ದಾರೆ. ಭಕ್ತಿ ಪಂಥದಲ್ಲಿ ಮೀರಾಬಾಯಿಯವರು ರಾಜಮನೆತನದವರಾದರೂ ಕೂಡ ಸಾಮಾಜಿಕ ವ್ಯವಸ್ಥೆಯನ್ನು ಎದುರಿಸಿ ಈ ಮೂಲಕ ಭಕ್ತಿ ಎಂಬ ಹೊಳೆಯಲ್ಲಿ ಮುಳುಗಿ ಕೊಚ್ಚಿ ಹೋದರು ಅವರು ತಮ್ಮ ಅನುಭವಗಳನ್ನು ಭಜನೆಗಳಲ್ಲಿ ವ್ಯಕ್ತಪಡಿಸಿ, ಮುಂದಿನ ಜನಾಂಗಕ್ಕೆ ದಾರಿ ತೋರಿದ್ದಾರೆ. ಈಗ ಶ್ರೀಮತಿ ಜಯದೇವಿತಾಯಿ ಲಿಗಾಡೆಯರೂ ಅದೇ ರೀತಿಯಲ್ಲಿಯೇ ಧಾರ್ಮಿಕ ಸಾಹಿತ್ಯದ ರಚನೆ ಮಾಡುತ್ತಿದ್ದಾರೆ. ಇವರ ಮಾರ್ಗದಲ್ಲಿಯೇ ಇತರ ಸ್ತ್ರೀಯರೂ ತಮ್ಮ ಕೊಡುಗೆಯನ್ನು ನೀಡಬಹುದಾಗಿದೆ.

—

**ಧಾರ್ಮಿಕ ಶಿಕ್ಷಣ ಯುವಕರಿಗೇಕೆ ಹಿಡಿಸುತ್ತಿಲ್ಲ**
(11ನೇ ಪುಟದಿಂದ)

ವನ್ನೂ ವಿವಿಧ ರೀತಿಯ ಜೀವಿಗಳನ್ನೂ ಬ್ರಹ್ಮ ಸೃಷ್ಟಿಸಲಿಲ್ಲ ಡಾರ್ವಿನ್ನನ ವಿಕಾಸವಾದದ ಪ್ರಕಾರ ಜೀವಿಗಳ ಸೃಷ್ಟಿಯಾಯ್ತು" .... ಇತ್ಯಾದಿ, ಇತ್ಯಾದಿ.

ಇನ್ನೂ ಕೇಳುತ್ತಾರೆ– "ಎಲ್ಲಿದೆ ನಿಮ್ಮ ಸ್ವರ್ಗ ನರಕ? ಚಂದ್ರನಲ್ಲಿ ಏನೇನೋ ಇದೆ ಎಂದು ಪುರಾಣಗಳಲ್ಲಿ ಹೇಳುತ್ತಾರೆ. ಆದರೆ ಅಂಥದ್ದೇನೂ ಅಲ್ಲಿ ಇಲ್ಲವಲ್ಲ? ಇಂಥ ಗೊಡ್ಡು ಪುರಾಣಾನ ಯಾಕೆ. ಓದಬೇಕು? ಯಾಕೆ ನಂಬಬೇಕು."

— ಇವೆಲ್ಲ ಸುಲಭವಾಗಿ ಅಸಡ್ಡೆ ಮಾಡಲಾಗದ, ಮಾಡಬಾರದ ಪ್ರಶ್ನೆಗಳು. ಆದರೆ ಸಾಮಾನ್ಯವಾಗಿ ಇಂದು ನಮ್ಮಲ್ಲಿರುವ ಧಾರ್ಮಿಕತೆಯ ವಕೀಲರುಗಳು, ಆಶ್ರಮ ಹಾಸ್ಟೆಲುಗಳಲ್ಲಿ ಧಾರ್ಮಿಕ ವಿಷಯ ಪಾಠ ಮಾಡುವವರು, ಈ ಪ್ರಶ್ನೆ ಕೇಳಿದವರಿಗೆ – "ನಿಮ್ಮ ಅನುಭವ ಬೆಳೆಯಬೇಕು; ಆಗ ನಿಮಗೆ ಗೊತ್ತಾಗುತ್ತದೆ" ಎಂಬ ಹಾರಿಕೆ ಉತ್ತರ ಕೊಡುತ್ತಾರೆ. ಅನುಭವ ಬೆಳೆದ ಮೇಲೆ ಅವರಿಗೇ ಗೊತ್ತಾಗುವುದಾದರೆ ಇವರ್‍ಯಾಕೆ ಈಗ ಅವರಿಗೆ ಆ ವಿಷಯ ಹೇಳಬೇಕು? ಹೀಗೆ ಅತೃಪ್ತಿ ಉತ್ತರ ಕೊಟ್ಟಾಗ ಪ್ರಶ್ನೆ ಕೇಳಿದವರು ಧರ್ಮದ ಬಗೆಗೆ ಮುಖ ತಿರುಗಿಸುವುದು ಸಹಜವೇ!

ಹಲಕೆಲವು ಹಾಸ್ಟೆಲ್ಲುಗಳಲ್ಲಿ, ಮಠಗಳಲ್ಲಿ, ವಿದ್ಯಾರ್ಥಿಗಳಿಗೆ ದಿನಕ್ಕೊಂದಿಷ್ಟು ಕಾಲ "ಧಾರ್ಮಿಕ ಪಾಠ'' ಎಂದಿರುತ್ತದೆ. ಆಯಾ ಮತಕ್ಕೆ ಸಂಬಂಧಿಸಿದ ಗ್ರಂಥಗಳನ್ನಲ್ಲಿ ಅವರಿಗೆ ಬೋಧಿಸಲಾಗುತ್ತದೆ. ಆ ಪಾಠಕ್ಕೆ ಅವರು ಹಾಜರಾಗದಿದ್ದರೆ ಅವರಿಗೆ ಅಂದಿನ ಊಟ cut! ಇಂಥ ತರಗತಿಗಳಿಗೆ ಶೇಕಡಾ ನೂರು ಹಾಜರಾತಿ ಇರುತ್ತದೆ. ಕಾರಣ? "ಊಟ cut!" ಆ ಬೆದರಿಕೆ ಹೋಯಿತೋ, – ಶ್ರೋತೃಗಳೇ ಇಲ್ಲ! ಯಾಕೆ ಹೀಗೆ?

ವಿದ್ಯಾರ್ಥಿಗಳಿಗೆ ಸ್ವಾಭಾವಿಕ ಅನಾಸಕ್ತಿ ಸ್ವಲ್ಪ ಇರಬಹುದಾದರೂ ಅದಕ್ಕೆ ಇನ್ನೊಂದು ಕಾರಣವೂ ಇದೆ. ಈ ಧಾರ್ಮಿಕ ಪಾಠಮಾಡುವ ಮಹಾನುಭಾವರಾರು? ನೆರೆದಲೆಯ ಮುದುಕರು. ಹುಡುಗರ ಬಿಸಿರಕ್ತದ ಅರಿವು ಮರೆತಿರುವವರು ಹೆಚ್ಚಾಗಿ, ವೈಜ್ಞಾನಿಕ ದೃಷ್ಟಿ ಕೋನವೇ ಇಲ್ಲದವರು; ಇಂಥವರು ವಿಜ್ಞಾನ ಯುಗದ ಮಕ್ಕಳನ್ನು ತೃಪ್ತಿಪಡಿಸಬಲ್ಲರೆ?

ಈ ಬೋಧಕರಲ್ಲಿ ಇನ್ನೂ ಒಂದು ದೋಷವಿದೆ. ಇವರು ತಾವು ಬೋಧಿಸುವ ಮತದ ಸಿದ್ಧಾಂತವನ್ನು ಮಾತ್ರ ಅಭ್ಯಾಸ ಮಾಡಿರುತ್ತಾರೆ. ಇತರೆ ಮತದ ಸಿದ್ಧಾಂತಗಳ ಬಗ್ಗೆ ಅವರ ಅಧಿಕೃತ ತಿಳಿವು ಅಷ್ಟಕ್ಕಷ್ಟೆ. 'ಗುರುವನು ಮಿಂಚಿನ ಶಿಷ್ಯರು' ಗಳೇ ಹೆಚ್ಚಾಗಿರುವ ಈ ಕಾಲದಲ್ಲಿ ವಿದ್ಯಾರ್ಥಿ ಯಾವುದೇ ಒಂದು ಕ್ಯಾಥೋಲಿಕ್, ಜೊರಾಸ್ಟ್ರಿಸಮ್ ಮತದ ತತ್ವದ ಎಳೆಹಿಡಿದು ಇವನ ವಾದವನ್ನು ಪ್ರಶ್ನಿಸಿದರೆ ಆ ಗುರು, ಸ್ವಾಮೀಜಿ, ಅಥವ ಉಪನ್ಯಾಸಕ ಇವನ ವಾದವನ್ನು ಖಂಡಿಸಲಾರ. ಅಂಥವರ ಬೋಧನೆಗೇನು ಬೆಲೆ? ಯಾರು ತಾನೇ ಅಂಥ ಕತೆ, ಅಂಥ ಪಾಠ ಕಲಿಯಲು ಬಂದಾರು?

ಒಟ್ಟಾರೆ ನೋಡುವಾಗ, ಇಂದು ನಾವು ಹಲವು ದೋಷಗಳಿಂದ ಕೂಡಿದ ರೀತಿಯಲ್ಲಿ ಧಾರ್ಮಿಕತೆಯನ್ನು ಪ್ರತಿನಿಧಿಸುತ್ತಿರುವುದರಿಂದ ಇಂದಿನ ಯುವಜನತೆ ಅದಕ್ಕೆ ಗುಡ್‌ಬೈ ಹೇಳುತ್ತಿದ್ದಾರೇನೋ ಎನ್ನಿಸುತ್ತದೆ. ವೈಜ್ಞಾನಿಕ ದೃಷ್ಟಿಯಿಂದ ಮತದ ತತ್ವಗಳನ್ನು ವಿಶ್ಲೇಷಿಸಿ ಬೋಧಿಸಬಲ್ಲ, ಧರ್ಮದೊಳಗಿರುವ ವಿಜ್ಞಾನವನ್ನೂ ತೆರೆದು ತೋರಿಸಬಲ್ಲ ಪ್ರತಿಭಾವಂತರನ್ನು ಪ್ರೋತ್ಸಾಹಿಸಿ, ತರಬೇತಿಗೊಳಿಸಿ ಅಂಥವರ ಮೂಲಕ ಧಾರ್ಮಿಕ ಶಿಕ್ಷಣ ನಡೆಸಲು ನಮ್ಮ ಗುರು ಪೀಠಗಳೂ, ಭಾರತದ ಸಂಸ್ಕೃತಿಯಲ್ಲಿ ಅಭಿಮಾನವುಳ್ಳ ಶಿಕ್ಷಣ ಸಂಸ್ಥೆಗಳೂ ಪ್ರಯತ್ನಿಸಬೇಕು.

ಇಲ್ಲವಾದರೆ ಈ "ವಸ್ತು ನಿಷ್ಠತೆ", "ಅನುಕೂಲಶಾಸ್ತ್ರ" "ಭ್ರಷ್ಟಾಚಾರ" ಗಳ, ವಿಜ್ಞಾನ, ತಾಂತ್ರಿಕತೆಗಳ ಸುಳಿಗೆ ಸಿಕ್ಕಿ ಯುವಕರಿಂದ ಧರ್ಮ ಶಾಶ್ವತವಾಗಿ ಬೇರೆಯಾದೀತು!

—

(ದಿನಾಂಕ 29.6.76 ರಿಂದ 29.7.76ರ ವರೆಗೆ)

# ಮಾಸಭವಿಷ್ಯ

ಜ್ಯೋತಿಷ್ಯ ವಿದ್ವಾನ್
—ಎನ್.ವಿ.ಚನ್ನವೀರಶಾಸ್ತ್ರಿ

**ಮೇಷ**

೧–೨ನೇ ಗುರು- ಅನಾರೋಗ್ಯ, ಸ್ತ್ರೀ ವಿರೋಧ, ಖರ್ಚು, ಮಾನಸಿಕ ವ್ಯಥೆ, ೪ ನೇ ಶನಿ- ವ್ಯಾಪಾರ, ವ್ಯಾಸಂಗ, ವ್ಯವಹಾರ, ಮಧ್ಯಮವಿರುತ್ತವೆ.

**ವೃಷಭ**

೧೨–೧ನೇ ಗುರು– ಅನಾರೋಗ್ಯ, ಹಣದುಬ್ಬರ, ಅಶಾಂತಿ, ಕಾರ್ಯವಿಳಂಬ, ಖರ್ಚು, ೩ನೇ ಶನಿ- ವ್ಯಾಸಂಗ, ವ್ಯಾವಸಾಯ, ವ್ಯಾಪಾರ, ಇವು ಮೇಲು

**ಮಿಥುನ**

೧೧–೧೨ ನೇ ಗುರು– ಸುಧಾರಣಾದಿಗಳು, ಉದ್ಯೋಗ ವ್ಯಾಪಾರ, ಮಧ್ಯಮ, ೨ನೇ ಶನಿ- ಖರ್ಚು ಪುರ್ಸಣೆ, ಆಪಾದನೆ, ಪ್ರಯಾಣ, ಮಾರ್ಪಾಟು.

**ಕರ್ಕ**

೧೦-೧೧ನೇ ಗುರು– ಗೌರವ, ವ್ಯಾಪಾರ, ಉದ್ಯೋಗ, ವ್ಯಾಸಂಗ, ಮೇಲು, ೧ನೇ ಶನಿ- ಅವಿಶ್ವಾಸ, ಅನಾರೋಗ್ಯ, ಮಾರ್ಗಾಯಾಸ ಜಣಿ ಸಿಟ್ಟು.

**ಸಿಂಹ**

೯–೧೦ನೇ ಗುರು– ಧೈರ್ಯ. ರಾಜಗೌರವ, ಧನಾಗವ, ದಕ್ಷತೆ, ಸನ್ಮಾನ, ೧೨ನೇ ಶನಿ- ಋಣ, ರಾಜ-ಕೀಯ ವ್ಯವಹಾರ, ಜಾಮೀನು, ಅಧಿಕ ಖರ್ಚು,

**ಕನ್ಯಾ**

೮–೯ನೇ ಗುರು– ಸ್ತ್ರೀ ವಿರೋಧ, ಧರ್ಮಕಾರ್ಯ, ಮಧ್ಯಮ ಸುಖ, ೧೧ನೇ ಶನಿ- ವ್ಯಾಪಾರಾದಿ ವ್ಯವಹಾರ, ಆರ್ಥಿಕ, ಕುಟುಂಬ ಸುಖ,

**ತುಲಾ**

೭-೮ ನೇ ಗುರು- ಸ್ಥಾನ ಮಾರ್ಪಾಟು, ಜವಾಬ್ದಾರಿ, ಭಯ, ಹಣದುಬ್ಬರ, ೧೦ನೇ ಶನಿ- ಕಾರ್ಯವಿಳಂಬ, ಪ್ರಯಾಣ, ವ್ಯಾಸಂಗ ವ್ಯಾಪಾರಾದಿ ಉತ್ತಮ.

**ವೃಶ್ಚಿಕ**

೬-೭ ನೇ ಗುರು – ಗುರುಹಿರಿಯರಕೋಪ, ಕರೆ-ಪತ್ರ, ಆರ್ಥಿಕ ಉತ್ತಮ, ೯ನೇ ಶನಿ- ಪಿತ್ರಾರ್ಜಿತ. ವಿಚಾರ, ಮಾರ್ಗಾಯಾಸ, ಕಾರ್ಯವಿಳಂಬ,

**ಧನಸ್ಸು**

೫–೬ ನೇ ಗುರು – ಹಟ, ಆಸಕ್ತಿ, ಸ್ವಪ್ರಯತ್ನ ಜಯ, ನೆರವು, ಶಿಫಾರ್ಸು. ೮ನೇ ಶನಿ- ಅಪಾಯ, ಗೃಹ ವಿಚಾರ, ಖರೀದಿ ವಿಚಾರ ಅನಾರೋಗ್ಯ,

**ಮಕರ**

೪–೫ ನೇ ಗುರು ವ್ಯಾಸಂಗ, ವ್ಯಾಪಾರ, ಸತ್ಸಂಗ, ಭಕ್ತಿ, ಧನಾಗಮ, ೭ನೇ ಶನಿ- ಸ್ತ್ರೀ-ಪುತ್ರ ಸಂತಾಪ, ಬೇಸರ, ಖರ್ಚು,

**ಕುಂಭ**

೩- ೪ ನೇ ಗುರು- ಸ್ವಪ್ರಯತ್ನ ವಿಳಂಬ, ಅಧಿಕ ಖರ್ಚು, ಅವಿಶ್ವಾಸ, ದೂರು, ೬ನೇ ಶನಿ- ಭೂಮೂಲಕ ಲಾಭ, ವ್ಯಾಪಾರ, ವ್ಯಾಸಂಗ, ಆದಾಯ, ಉತ್ತಮ,

**ಮೀನ**

೨–೩ನೇ ಗುರು- ನಿರಾಶೆ, ನಿಸ್ಸಹಾಯ, ಖರ್ಚು, ಬೇಸರ, ನಿಷ್ಠುರ, ೫ನೇ ಶನಿ- ಗುಪ್ತ ಚಿಂತೆ, ಸ್ಥಾನ-ಭ್ರಷ್ಟತೆ, ಮನೋಶಾಂತಿ ಇರಲಾರದು. —

---

[ 15 ನೇ ಪುಟದಿಂದ ] **ವಾಕ್ ಭ್ರಂಶ**

ರೋಗಿಯ ಸ್ವಶಕ್ತಿ ನಾಶವಾಗಿದ್ದರೆ, ಅದು ಮೆಲ್ಲ ಮೆಲ್ಲನೆ ಸರಿಹೋಗಬೇಕಾಗುವುದು. ಸುತ್ತಲಿಂದಲೂ ಬೇರೆ ಬೇರೆ ಉತ್ತೇಜನಗಳನ್ನು ಕೊಟ್ಟು ಅವನ ಜ್ಞಾನೇಂದ್ರಿಯಗಳನ್ನು ಜಾಗ್ರತಗೊಳಿಸಬೇಕು. ಮೆಲ್ಲ ಮೆಲ್ಲನೆ ಓದುವ, ಕೇಳುವ, ನೋಡಿದವಸ್ತುಗಳನ್ನು ಸ್ಪರ್ಶಿಸುವ ಹಾಗೂ ರುಚಿನೋಡುವ ಕ್ರಿಯೆಗಳಿಂದ ಹಿಂದೆಯೇ ತಿಳಿದಿರುವ ವಸ್ತುಗಳ ಸ್ಮರಣಶಕ್ತಿ ಮರಳಲು ಸಹಾಯವಾಗುವುದು.

ಈ ರೀತಿ ರೋಗಿಗೆ ಪ್ರೋತ್ಸಾಹವಿತ್ತರೆ ಕೆಲ ದಿನಗಳಲ್ಲೇ ತಾನು ಸಾಕಷ್ಟು ಬದಲಾವಣೆ ಹೊಂದಿದಂತೆ ಅವನಿಗೆನ್ನಿಸುವುದು. ಮಾತಾಡುವುದರಿಂದ ಒಂದಿಷ್ಟಾದರೂ ಸಫಲತೆ ಸಿಕ್ಕಿತೆಂದರೆ ಅದನ್ನು ಮುಕ್ತಕಂಠದಿಂದ ಪ್ರಶಂಸಿಸಬೇಕು. ಈ ಪ್ರೋತ್ಸಾಹದಿಂದ ಆತ್ಮವಿಶ್ವಾಸ ಉಂಟಾಗಿ ಆತ ಮೆಲ್ಲಮೆಲ್ಲನೆ ಮಾತಾಡಲು ಆರಂಭಿಸುತ್ತಾನೆ. ಈ ರೀತಿ ಕೆಲ ದಿನಗಳಲ್ಲೇ ಆತ ಪೂರ್ಣ ಸ್ವಸ್ಥನಾಗುತ್ತಾನೆ. —

[ಹಿಂದೀ 'ನವನೀತ' ದ ಕೃಪೆಯಿಂದ]

'ಸಿದ್ಧಗಂಗಾ'

## ಚಿರಯುವಾಗಲೆಂದು ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗ

141 ಶ್ರೀ ಹೆಚ್. ಎಸ್. ಸಿದ್ಧಲಿಂಗಯ್ಯ,
ವಿಜಯನಗರ, ಬೆಂಗಳೂರು

142 ಶ್ರೀ ಸಿ. ಎಸ್. ರುದ್ರಯ್ಯ ಸಬ್ ಇನ್‌ಸ್ಪೆಕ್ಟರ್,
ಮಂಗಳೂರು

143 ಶ್ರೀ ಡಿ. ಎಸ್. ರಾಜಶೇಖರ್,
ಹನುಮಂತ ನಗರ, ಬೆಂಗಳೂರು

144 ಶ್ರೀ ಎಸ್. ಆರ್. ಸಿದ್ಧರಾಜು,
ವಿನಾಯಕ ವಾಣಿಜ್ಯ ಶಾಲೆ, ಬೆಂಗಳೂರು

145 ಶ್ರೀ ಎಂ. ಕೆ. ನಂಜುಂಡಪ್ಪ,
ಮುದಿಗೆರೆ, ಗೌರಿಬಿದನೂರು ತಾ॥

146 ಎನ್. ಪ್ರಮೀಳ, ಅಡ್ವೋಕೇಟ್,
ಚಾಮರಾಜಪೇಟೆ, ಬೆಂಗಳೂರು

147 ಶ್ರೀ ಮರಪ್ಪ, ಸರ್ಕಲ್ ಇನ್‌ಸ್ಪೆಕ್ಟರ್,
ನೆಲಮಂಗಲ

148 ಶ್ರೀ ವಿರೂಪಾಕ್ಷಗೌಡ
ಸಿರಗುಪ್ಪ, ಬಳ್ಳಾರಿ ಜಿಲ್ಲೆ

149 ಶ್ರೀ ಬಿ. ಬಿ. ಚನಪ್ಪ, ಬಾಗಿವಾಲು,
ಹೆಚ್. ಎನ್. ಪುರ ತಾ॥ ಹಾಸನ ಜಿಲ್ಲೆ

150 ಶ್ರೀ ನಂಜಪ್ಪ, ಬಾಗಿವಾಲು,
ಹೆಚ್. ಎನ್. ಪುರ ತಾ॥, ಹಾಸನ ಜಿಲ್ಲೆ

151 ಶ್ರೀ ಕುಮಾರಸ್ವಾಮಿ,
ಸೀಬ ಇಂಟರ್‌ನ್ಯಾಷನಲ್ ಏರ್‌ಪೋರ್ಟ್
ಮಸ್‌ಕಾಟ್, ಸುಲ್ತಾನೇಟ್ ಆಫ್ ಒಮನ್,
ಅರೇಬಿಯನ್‌ಗಲ್ಫ್

152 ಶ್ರೀ ಕೆ. ಕೆಂಪೇಗೌಡ, ಜೂ॥ ಇಂಜಿನಿಯರ್
ಹುಲ್ಲಹಳ್ಳಿ, ನಂಜನಗೂಡು ತಾ॥

153 ಪ॥ ಶ್ರೀ ಎ. ಡಿ. ಸಿದ್ಧಲಿಂಗಪ್ಪ.
ಅರೆಹಳ್ಳಿ, (via) ಕಾಡಗೋಡಿ.
ಬೆಂಗಳೂರು ಜಿಲ್ಲೆ

154 ಶ್ರೀ ಹೆಚ್. ಸಿ. ಬಸವರಾಜು
ಜೂ॥ ಇಂಜಿನಿಯರ್, ಮೊಳಕಾಲ್ಮೂರು,
ಚಿತ್ರದುರ್ಗ ಜಿಲ್ಲೆ

155 ಶ್ರೀ ಪಿ. ಪುಟ್ಟರಾಜಪ್ಪ,
ದೇವನ ಹಳ್ಳಿ, ಬೆಂಗಳೂರು ಜಿಲ್ಲೆ

156 ಶ್ರೀ ಬಿ. ವಿ. ಸುರಪೂರ್
ಮಂಗಳೂರು, ಗುಲಬರ್ಗ ಜಿಲ್ಲೆ

157 ಶ್ರೀ ಸಿ. ಶಿವರುದ್ರಪ್ಪ ಕಂಟ್ರಾಕ್ಟರ್,
ಬಸವನ ಗುಡಿ, ಬೆಂಗಳೂರು

158 ಶ್ರೀ ಬಿ. ಜ ಬಸವನಗೌಡ, ಎಕ್ಸೈಜು
ಇನ್‌ಸ್ಪೆಕ್ಟರ್, ರಾಜಾಜಿನಗರ, ಬೆಂಗಳೂರು

159 ಶ್ರೀ ಎಸ್. ಸಿದ್ದಲಿಂಗಪ್ಪ,
ನಿಟ್ಟೂರು, ತುಮಕೂರು ಜಿಲ್ಲೆ

160 ಶ್ರೀ ಬಿ. ಅಡವೀಶಯ್ಯ,
ಪುರ, ಗುಬ್ಬಿ ತಾ॥. ತುಮಕೂರು ಜಿಲ್ಲೆ

161 ಶ್ರೀ ಬಿ. ಎಸ್. ಬಸಪ್ಪ,
ಪುರ, ಗುಬ್ಬಿ ತಾ॥, ತುಮಕೂರು ಜಿಲ್ಲೆ

162 ಶ್ರೀ ಟಿ. ಸಿದ್ಧಲಿಂಗಪ್ಪ,
ನಿಟ್ಟೂರು ನಂದಿಹಳ್ಳಿ, ತುಮಕೂರು ಜಿಲ್ಲೆ

163 ಶ್ರೀ ಎನ್. ಬಸವಲಿಂಗಯ್ಯ,
ಅಮ್ಮನಘಟ್ಟ, ಗುಬ್ಬಿ ತಾ॥,
ತುಮಕೂರು ಜಿಲ್ಲೆ

(ಮುಂದುವರಿಯುತ್ತದೆ)

'SIDDAGANGA' Monthly, Sree Siddaganga Mutt. KRN Q-9.
Registered with the Registrar of News papers for under India No. 17139|69

## ನಿಮಗೆ ಉದ್ಯೋಗ ನೀಡಿದವರು ಕೊಡದಿದ್ದರೆ ಏನಾಯಿತು? ನೀವೇ ಸ್ವತಃ ವಿಶ್ರಾಂತಿ ವೇತನವನ್ನು ಕೊಟ್ಟುಕೊಳ್ಳಿ!

ಇದು

## "ವಿಜಯಾ ವಿಶ್ರಾಂತಿವೇತನ ಯೋಜನೆ"

### ಯಲ್ಲಿ ಅತ್ಯಂತ ಸುಲಭ!!

144 ತಿಂಗಳು ಸತತವಾಗಿ ಪ್ರತಿತಿಂಗಳು 100 ರೂಗಳ ಠೇವಣಿ ಇಡಿರಿ. ಈ ಅವಧಿಯ ಕೊನೆಯಲ್ಲಿ ನೀವು ಕೆಳಗಿನ ಸೌಲಭ್ಯಗಳನ್ನು ಹೊಂದುವಿರಿ.



★ ನಮ್ಮಲ್ಲಿ ಶೇಖರಿಸಿದ 14,400 ರೂ. ಗಳ ಒಂದು ಆಕರ್ಷಕ ಮೊತ್ತ.

★ ಆಜೀವ ಪರ್ಯಂತ ವಿಶ್ರಾಂತಿ ವೇತನ!
ನಿಮ್ಮ ಉಳಿದ ಜೀವನಾವಧಿ ಪೂರ್ತಾ ತಿಂಗಳಿಗೆ 100 ರೂ. ಗಳಂತೆ ಪಡೆಯಿರಿ.

★ ನೀವು ವಿಶ್ರಾಂತಿ ವೇತನಾವಧಿಯ ಯಾವುದೇ ವೇಳೆಯಲ್ಲಿ ವಿಶ್ರಾಂತಿ ವೇತನ ಪಡೆಯುವುದನ್ನು ಸ್ಥಗಿತಗೊಳಿಸಲು ತೀರ್ಮಾನಿಸಿದರೆ ಈ ಯೋಜನೆಯ ನಿಯಮಾವಳಿಯಂತೆ ನಿಮಗೆ 12,000ರೂ.ಗಳ ಹೆಚ್ಚು ಮೊತ್ತವನ್ನು ನೀಡಲಾಗುವುದು.

★ ಹುಟ್ಟು ಹಬ್ಬದ ಕೊಡುಗೆ:
ಹಣ ಪಾವತಿಯ ಅವಧಿಯಲ್ಲಿ ನಿಮ್ಮ ಪ್ರತಿವರ್ಷದ ಹುಟ್ಟು ಹಬ್ಬದ ದಿನವೂ ಹಾರ್ದಿಕ ಶುಭಾಶಯಗಳೊಡನೆ ಒಂದು ಉಡುಗೊರೆಯನ್ನು ಕಳುಹಿಸುತ್ತೇವೆ.

ಯಾವುದೇ ವಯಸ್ಸಿನಲ್ಲಿ ಬೇಕಾದರೂ
ಈ ಯೋಜನೆಯಲ್ಲಿ ಹಣ ಉಳಿತಾಯ ಮಾಡಲು ತೊಡಗಿ.

ಈ ಬಗ್ಗೆ ಎಲ್ಲ ವಿವರಗಳನ್ನು ನಿಮ್ಮ ಸಮೀಪದ ವಿಜಯಾ ಬ್ಯಾಂಕ್ ಶಾಖೆಯಲ್ಲಿ ಇಂದೇ ಪಡೆಯಿರಿ. ದೇಶಾದ್ಯಂತ 400 ಕ್ಕೂ ಮಿಕ್ಕ ಶಾಖೆಗಳನ್ನು ನಾವು ಹೊಂದಿದ್ದೇವೆ.

# ವಿಜಯಾ ಬ್ಯಾಂಕ್ ಲಿಮಿಟೆಡ್

ರಿಜಿಸ್ಟರ್ಡ್ ಕಛೇರಿ:
ಲೈಟ್ ಹೌಸ್ ಹಿಲ್ ರೋಡ್, ಮಂಗಳೂರು.

ಆಡಳಿತ ಕಛೇರಿ:
ರೆಸಿಡೆನ್ಸಿರೋಡ್, ಬೆಂಗಳೂರು-25.

ಛೇರ್ಮನ್:- ಎಂ. ಸುಂದರರಾಮ್ ಶೆಟ್ಟಿ

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.